Koravanji

# ಕೊರವಂಜಿ

ಜುಲೈ ೧೯೪೯



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು:

ಶ್ರೀ॥ ದಾಶರಥಿ ದೀಕ್ಷಿತ್

ಶ್ರೀ॥ ಗಂಗಾಧರ

ಶ್ರೀ॥ ರುದ್ರಮ್ಮ

ಶ್ರೀ॥ ರೇವಣ್ಣ

ಶ್ರೀ॥ ಹಾ. ರಾ.

ಶ್ರೀ॥ ಪಾಟೀಳಿ

ಶ್ರೀ॥ ಶಿವಣ್ಣ

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಬೆಂಗಳೂರಿನಲ್ಲಿ ಇದುವರೆವಿಗೂ 2,81,982 ಮಂದಿ
ಚಲನಚಿತ್ರ ಪ್ರೇಮಿಗಳ ಮನಸ್ಸನ್ನು ಸೂರೆಗೊಂಡ
ಅತ್ಯುತ್ತಮ ಚಲನಚಿತ್ರ



# — ಕೀಲುಗುರ್ರಂ —

(ತೆಲುಗು)

ನಾಗೇಶ್ವರರಾವ್ ★ ಅಂಜಲೀದೇವಿ



| | | | |
|---|---|---|---|
| ಬೆಂಗಳೂರು | ★ | ಮಿನರ್ವ | 19ನೇ ವಾರ |
| ಮಂಡ್ಯ | ★ | ಮಂಡ್ಯಾ ಟಾಕೀಸ್ | 7ನೇ ವಾರ |
| ಶಿವಮೊಗ್ಗ | ★ | ಸುದರ್ಶನ | 4ನೇ ವಾರ |
| ಹಾಸನ | ★ | ಇಂಪೀರಿಯಲ್ | 3ನೇ ವಾರ |
| ಅತ್ತಿಬೆಲೆ | ★ | ಗೌರೀಶಂಕರ | 2ನೇ ವಾರ |

**A TALLAM RELEASE**



## ನೀರನ್ನೂ, ಗಂಜಿಯನ್ನೂ ಈ ರೀತಿ ಮಾಡುವುದು ಸುಲಭ

**ಬಾರ್ಲೀ ನೀರು:** ತಲೆಸಮ 2 ಚಮಚಾಗಳಷ್ಟು ಪ್ಯಾಟೆಂಟ್ ಬಾರ್ಲಿಗೆ ನೀರು ಸೇರಿಸಿ ಅಂಟಾಗಿ ಕಲಸಿ, ಒಂದು ಪೈಂಟು ನೀರು ಬೆರಸಿ, 5 ನಿಮಿಷಗಳ ವರೆಗೆ ಮಾತ್ರ ಕುದಿಸಿರಿ. ಉಪ್ಪು, ಸಕ್ಕರೆ ಅಥವಾ ನಿಂಬೆಯ ರಸವನ್ನು ನಿಮ್ಮ ನಿಮ್ಮ ರುಚಿಗೆ ತಕ್ಕಂತೆ ಸೇರಿಸಿಕೊಳ್ಳಿರಿ.

**ಗಂಜಿ:** ಇದನ್ನು ಸಾಧಾರಣ ರೀತಿಯಲ್ಲೇ ಮಾಡಿರಿ. ಆದರೆ, ಇದನ್ನು ಮಾಡಲು ಅಷ್ಟೇ ನಿಮಿಷಗಳು ಬೇಕಾಗುವುವು.

ಒಂದು ಟೀ ಚಮಚಾದಷ್ಟು ಪ್ಯಾಟೆಂಟ್ ಬಾರ್ಲಿಗೆ ಎಂಟು ಟೇಬಲ್ ಚಮಚಾಗಳಷ್ಟು ಸಾಧಾರಣ ಪರ್ಲ್ ಬಾರ್ಲಿ ಸಮನಾಗುವುದು.






|| ಶುಭಮಸ್ತು ||

ಸಮಸ್ತ ಸನ್ಮಂಗಳಾನಿ ಭವಂತು

# ಮದುವೆ ಜವಳಿ

**ಹೆಸರುವಾಸಿಯಾದ ಅಂಗಡಿ**

**ಬಾಹುಸಾರ್ ಕಂಪೆನಿ, ಮೈಸೂರು.**



## ರೇಷ್ಮೆ ಸೀರೆಗಳು

ನೀವು ಅನೇಕ ಬೆಂಗಾಲ್, ಬನಾರಸ್, ಮೈಸೂರು ಸಿಲ್ಕ್ ಸೀರೆಗಳನ್ನು ನೋಡಿದ್ದೀರಿ ಬಾಹುಸಾರ್ ಕಂಪೆನಿಯಲ್ಲಿರುವುದನ್ನೂ ನೋಡಿ! ಎಂತೆಂತಹಾ ಒಳ್ಳೊಳ್ಳೇ ನಮೂನೆಗಳಿವೆ ಎಂಬುದು ನಿಮ್ಮ ಮನಸ್ಸಿಗೇನೇ ಖಾತ್ರಿಯಾಗುತ್ತದೆ. ರೇಷ್ಮೆ ಸೀರೆಗಳಿಗೆ ಹೆಸರುವಾಸಿಯಾದ ಅಂಗಡಿ ಎಂದರೆ

**ಬಾಹುಸಾರ್ ಕಂಪೆನಿ, ಓಲ್ಡ್ ಮೈಸೂರು ಬ್ಯಾಂಕ್ ರೋಡ್, ಮೈಸೂರು.**




ಮನೋಲ್ಲಾಸ ಮತ್ತು ಉಪಶಮನಕ್ಕಾಗಿ ಲಕ್ಷಗಟ್ಟಲೆ ಜನರು ಟೀಯನ್ನು ಬಯಸುವರು. ಆದರೆ, ಇಷ್ಟೊಂದು ಜನರಿಗೆ ಉತ್ತಮ ಟೀ ಏನೆಂದು ಗೊತ್ತಿಲ್ಲವೆಂದರೆ, ಎಷ್ಟೊಂದು ವಿಚಾರಕರ! ಉತ್ತಮ ಟೀಗೆ ಖರ್ಚು ಹೆಚ್ಚಿಲ್ಲ. ಸರ್ವಸಾಧಾರಣವಾದ ಐದೇ ನಿಯಮಗಳನ್ನು ಅನುಸರಿಸಬೇಕಷ್ಟೆ! ನಿಮ್ಮ ಹಣದ ಪೂರ್ತಿ ಬೆಲೆಯನ್ನು ಪಡೆಯಲು, ನಿಮ್ಮ ಟೀಯ ಉತ್ತಮ ರುಚಿಯನ್ನು ಸವಿನೋಡಲು, ಈ ನಿಯಮಗಳನ್ನು ಮನದಟ್ಟುಮಾಡಿಕೊಳ್ಳಿರಿ. ನಿಮ್ಮ ಮನೆಯವರೂ ಅನುಸರಿಸುವಂತೆ ಮಾಡಿರಿ.

ಶಾಸ್ತ್ರೀಯವಾಗಿ ತಯಾರಿಸಿದ **ಟೀ**ಯಷ್ಟು ರುಚಿಕರವಾದುದು ಬೇರಾವುದೂ ಇಲ್ಲ.



ಇಂಡಿಯನ್ ಟೀ ಮಾರ್ಕೆಟ್ ಎಕ್ಸ್‌ಪ್ಯಾನ್ಷನ್ ಬೋರ್ಡಿನವರಿಂದ ಪ್ರಕಟಿಸಲ್ಪಟ್ಟಿದ್ದು.

**ಆ ಐದು ಸುಲಭ ನಿಯಮಗಳು**

★

[illegible]

IK 298 KN



# ಕೊರವಂಜಿ



ಸಂಪುಟ ೯ ಜುಲೈ ೧೯೪೯ ಸಂಚಿಕೆ ೪

## ಕುಹಕಿಡಿಗಳು

ಕಾಲೇಜುಗಳಲ್ಲಿ "ಸೀಟು"ಗಳನ್ನು ಅರ್ಧಕ್ಕೆ ಇಳಿಸಿದ್ದಾರಂತೆ.

—ಈಗಿನ ರೇಷನ್ನಲ್ಲಿ, ಹುಡುಗರ ಬೆಳೆವಣಿಗೆ ನೋಡಿದರೆ, ಅರ್ಧ "ಸೀಟೇ" ಸಾಕು ಅಲ್ಲವೇ ?

* * *

ಆಫ್‌ಘಾನಿಸ್ಥಾನ್—ಪಾಕೀಸ್ಥಾನಗಳ ಮಧ್ಯೆ ಹುಟ್ಟಿರುವ ವಿರಸಕ್ಕೂ—ಲಿಯಾಖತ್ ಅಲಿಖಾನರವರು ಮಾಸ್ಕೋವಿಗೆ ಹೋಗುವುದಕ್ಕೂ—ಖಂಡಿತ ಸಂಬಂಧ ಇಲ್ಲವಂತೆ.

* * *

ಹೋಟಲುಗಳನ್ನು ಮುಚ್ಚಬೇಕೆಂದು ನಿರ್ಧರಿಸಿರುವುದಕ್ಕೂ—ಸಂಸ್ಥಾನದ ವೈದ್ಯರುಗಳೆಲ್ಲಾ ಸಮ್ಮೇಳನ ಸೇರಿದ್ದಕ್ಕೂ—ಏನೂ ಸಂಬಂಧವಿಲ್ಲವಂತೆ.

* * *

"ಹೆಚ್ಚು ಆಹಾರ ಬೆಳೆಯಿರಿ" ಎಂಬ ಬೋರ್ಡಿನ ಮೇಲೆ ನಾಲ್ಕು ಹಕ್ಕಿಗಳು ಕೂತಿದ್ದವಂತೆ.

—ಬೀಜ ಚೆಲ್ಲಲಿ ಅಂತ ಕಾದಿರಬಹುದೇ ?

* * *

ರಾಷ್ಟ್ರಪತಿಗಳು, ಸದ್ಯಕ್ಕೆ ಆಂಧ್ರ ರಾಷ್ಟ್ರಪತಿಯಾಗಿ ಉಳಿದರೂ ಸಾಕು—ಮದ್ರಾಸ್ ಹೋದರೆ ಹೋಗಲಿ—ಎಂದು ಅನ್ನಲಿಲ್ಲವಂತೆ.

* * *

“ನಾವೆಲ್ಲರೂ ಅಣ್ಣ ತಮ್ಮಂದಿರಂತೆ”. ಅ.ವ್ಯ.ಕಾ.ಸ. ಹಿರಿಯರ ಹೇಳಿಕೆ.

— ಆಹಾ ! ಹುಟ್ಟಿದಾಗ ಅಣ್ಣ ತಮ್ಮಂದಿರು, ಬೆಳೆಯುವಾಗ ?

* * *

ಪಂಡಿತ ನೆಹ್ರೂ ಅವರು ‘ಷಾ’ ಭೇಟಿಯಾದಾಗ ಮಾವಿನ ಹಣ್ಣು ತೆಗೆದು ಕೊಂಡು ಹೋಗಿದ್ದರಂತೆ.

—ಆದರೆ ಟ್ರೂಮನ್‌ರನ್ನು ನೋಡ ಹೋಗುವಾಗ ಮಿಡಿ ಉಪ್ಪಿನಕಾಯಿ ತೆಗೆದುಕೊಂಡು ಹೋಗುತ್ತಾರೆಂಬುದು ಖಚಿತವಲ್ಲವಂತೆ.

* * *

ಕಾಶ್ಮೀರದ ಸಮಸ್ಯೆ ಗಂಡಹೆಂಡಿರ ಜಗಳದಂತೆ. “ಭಾಷಣ”

—ಅಂದರೆ ಕಾಶ್ಮೀರ ಕಮಿಷನ್ನಿನವರು ಉಂಡು ಮಲಗೋತನಕಾನೇ ?

* * *

ಮೊನ್ನೆ ದಿವಸ ಪೋಲೀಸರ ಕೈಯಿಂದ ತಪ್ಪಿಸಿಕೊಂಡ ಜೇಬುಗಳ್ಳ— ಇನ್ನೂ ಸಿಕ್ಕಿಲ್ಲವಂತೆ.

— ರಿಕಾರ್ಡ್ ಆಫೀಸಿನಲ್ಲಿ ಮರೆಮಾಚಿಕೊಂಡಿರುವನೆಂದೂ ಹೊರಗೆ ಬರಲು ಅವನಿಗೇ ದಾರಿ ತೋರದೆ ಇರಬಹುದೆಂದೂ ಹುಟ್ಟಿದ್ದ ಸುದ್ದಿಯು ನಿರಾಧಾರವಾದುದಂತೆ.

* * *

ಮೂರು ಡಿಸ್ಟ್ರಿಕ್ಟ್‌ಗಳಲ್ಲಿ ಪಾನನಿರೋಧ ಜಾರಿಗೆ ಬಂದಾಗ—ಅಬ್ಕಾರಿ ಬಾಬ್ತು ೫ ಲಕ್ಷ ಹೆಚ್ಚು ಬಂತಂತೆ.

ಐದು ಡಿಸ್ಟ್ರಿಕ್ಟ್‌ಗಳಲ್ಲಿ ಜಾರಿಗೆ ಬಂದಾಗ—೭ ಲಕ್ಷ ಜಾಸ್ತಿಯಾಯ್ತಂತೆ.

—ಅಯ್ಯೋ ! ದೇವರೇ ! ಇನ್ನು ಒಂಭತ್ತು ಡಿಸ್ಟ್ರಿಕ್ಟ್‌ಗಳಲ್ಲೂ ಜಾರಿಗೆ ಬಂದರೆ— ಇನ್ನೆಷ್ಟು ಹೆಚ್ಚಾಗುತ್ತೋ.

* * *

ಆಗ ಕಬ್ಬಿಣ ಇದ್ದಾಗ ಸಿಮೆಂಟಿರಲಿಲ್ಲ—ಈಗ ಸಿಮೆಂಟ್ ಸಿಗುವಾಗ ಕಬ್ಬಿಣ ಇಲ್ಲ—ಆದರೆ ಇಷ್ಟರಲ್ಲೇ ಎರಡೂ ಸಿಗಬಹುದು ಮನೆ ಅಭಾವ ತಪ್ಪಬಹುದು. “ಹೇಳಿಕೆ”

– ಅಷ್ಟು ಹೊತ್ತಿಗೆ ನಮ್ಮ ಹತ್ತಿರ ಹಣವೇ ಇರುವುದಿಲ್ಲ !

* * *

# ಉರಿಗಾಳು

ಹೋಟೆಲುಗಳನ್ನು ಮುಚ್ಚಿ, ಕಾಲೇಜುಗಳನ್ನು ತೆರೆಯುವುದು ಯಾವ ನ್ಯಾಯ ?— ಎಂದು ವಿದ್ಯಾರ್ಥಿಗಳು ಕೇಳುತ್ತಿರುವರು.

*                *                *

ತನ್ನ ಕಾಲಿನ ಮೇಲೆ ತಾನು ನಿಂತುಕೊಳ್ಳಲು ತಿಳಿಯದ ತರುಣರು ಮಾತ್ರ ಈಗ ಸೀಟಿಗಾಗಿ ಪರದಾಡುತ್ತಿರುವರಂತೆ.

*                *                *

ಕರ್ನಾಟಕದ ಏಕೀಕರಣವಾಗುವತನಕ ತತ್ಸಂಬಂಧವಾದ ಚರ್ಚೆಗಳನ್ನೆಲ್ಲ ಮುಂದುವರಿಸಬೇಕೆಂದು ಪ್ರಮುಖ ರಾಜಕೀಯ ಸಂಸ್ಥೆಯೊಂದು ತೀರ್ಮಾನಿಸಿದೆ.

*                *                *

"ಉತ್ತರ ಕರ್ನಾಟಕದವರು ಏಕೀಕರಣ ಪ್ರಯುಕ್ತ ಖಾಲಿ ಗೊಂದಲಗಳನ್ನೆಬ್ಬಿಸುತ್ತಿರುವಾಗ, ನಮ್ಮ ದೇಶದ ನಾಯಕರುಗಳು ಹೆಚ್ಚು ಪರಿಶ್ರಮ ತೆಗೆದುಕೊಳ್ಳದಿರುವುದು ಬಹಳ ಶೋಚನೀಯ"—ಸಮ್ಮೇಳನ (ಭಾಷಣ).

*                *                *

ಸಂಸ್ಥಾನದಲ್ಲಿ ೭ ಕಡೆಗಳಲ್ಲಿ ವ್ಯವಸಾಯದ ಕಾಲೇಜುಗಳನ್ನು ಸ್ಥಾಪಿಸುವ ಅವಶ್ಯಕತೆ ಇಲ್ಲ—ಎಂದು ಸಚಿವರು ಉತ್ತರವಿತ್ತರು....ಮಿಕ್ಕ ಕಡೆಗಳಲ್ಲಿ ?

*                *                *

"ಅಧ್ಯಕ್ಷರ ಭಾಷಣ ಮುಕ್ತಾಯವಾಗುವುದೆಂದು ತಿಳಿದ ಕೂಡಲೇ, ತಮ್ಮಷ್ಟಕ್ಕೆ ತಾವೇ, ಸಭಿಕರೆಲ್ಲರೂ ಏಕ ಕಂಠದಿಂದ ಘೋಷಣ ಮಾಡಿದರು" (ವರದಿ) . .ಆಗ ಮುಕ್ತಾಯ ಮಾಡದೆ, ವಿಧಿ ಇಲ್ಲ.

*                *                *

"ಸತ್ಯಮಾರ್ಗವನ್ನೇ ಅವಲಂಬಿಸುವ ಲಾಯರಿಗೆ ಎಲ್ಲೂ ಪೈಪೋಟಿಯ ಭೀತಿಯೇ ಇಲ್ಲ" (ಭಾಷಣ)... ... ಅಂಥವ ಇನ್ನೊಬ್ಬ ಇದ್ದರೆತಾನೆ ?

*                    *                    *

"ಮಹಿಳಾ ಹಿಂದೀ ವಿದ್ಯಾಲಯ"....ಹಿಂದಿಯಲ್ಲೂ ಸ್ತ್ರೀಲಿಂಗ—ಪುಲ್ಲಿಂಗ ವಿದೆಯೆ ?

*                    *                    *

"ಮಂಡ್ಯ ಡಿಸ್ಟ್ರಿಕ್ಟ್ ಜಿಲ್ಲಾ ಸಮ್ಮೇಳನವು ಈ ಸಾರಿ ಮಂಡ್ಯ ಟಾಕೀಸ್ ನಲ್ಲಿ ಜರುಗಿತು" (ಬಾತ್ಮಿ).

*                    *                    *

ಅಶಕ್ತಪಾಲನ ಸಭೆಯಲ್ಲಿ ನಿನ್ನೆದಿನ ಶ್ರೀ .......ರು ಸುಮಾರು ೨ ಘಂಟೆ ಗಳ ಕಾಲ ಭಾಷಣ ಮಾಡಿದರು" (ಪತ್ರಿಕೆ) ;.. ....ಪಾಪ.

*                    *                    *

"ಪ್ರಾರ್ಥನೆಯಾದನಂತರ ಕಾರ್ಯದರ್ಶಿಯೂ ಅಧ್ಯಕ್ಷರೂ ಮುಖ್ಯ ಅತಿಥಿ ಗಳ ಗುಣಗಾನ ಮಾಡಿದರು. ಅನಂತರ, ಮುಖ್ಯ ಅತಿಥಿಗಳು ಕಾರ್ಯದರ್ಶಿ ಯನ್ನು ಮೆಚ್ಚಿ, ಅಧ್ಯಕ್ಷರ ಸೇವೆಯನ್ನು ಕೊಂಡಾಡಿದರು. ಕಡೆಗೆ, ಕಾರ್ಯ ದರ್ಶಿ ಅಧ್ಯಕ್ಷರಿಗೂ ಮುಖ್ಯ ಅತಿಥಿಗಳೂ ಹಾರ ತುರಾಯಿಗಳನ್ನರ್ಪಿಸಿದರು. ರಾತ್ರಿ ೮-೪೫ಕ್ಕೆ ಸಭೆ ಮುಕ್ತಾಯಗೊಂಡಿತು." (ವರದಿ).

*                    *                    *

"ಮೈಸೂರು, ಜಗತ್ತಿನಲ್ಲಿ ಎರಡನೆಯ ಡೆನ್‌ಮಾರ್ಕ್ ಆಗುವುದರಲ್ಲಿ ಸಂದೇಹವಿಲ್ಲ" (ಭಾಷಣ). ಈ ಸುದ್ದಿಯನ್ನು ಕೇಳಿ ಡೆನ್‌ಮಾರ್ಕ್‌ನವರು ಏನ ನ್ನುತ್ತಾರೋ ?

*                    *                    *

# ★ "ಸರಿತೂಗಿಸುವುದು" ★

———o———

ಒಂದಾಣೆ ಕೊಡಪ್ಪಾ! ಎಂದ ನನ್ನ ಕುಮಾರ ಕಂಠೀರವ. ಮೂರು ವರ್ಷದ ಮಗು ಇದಕ್ಕೆ ಆಣೆ ಏಕೆ ಎನ್ನಿಸಿತು. ಯಾಕಪ್ಪಾ? ಒಂದಾಣೆ ಏನು ಕೊಂಡು ಕೊಳ್ಳುತ್ತೀ ಎಂದೆ. ಒಂದು ಕಾಸಿಗೆ ಕುದುರೆ. ಒಂದು ಕಾಸಿಗೆ ಕೋಚುಗಾಡಿ ಒಂದು ಕಾಸಿಗೆ ಮನೆ ಒಂದು ಕಾಸಿಗೆ ಮೋಟಾರು. ತುಂಬಾ ಕಾಸಿಗೆ ಪೆಪ್ಪರ್‌ಮೆಂಟು ಎಂದ. ಬಡ್ಜೆಟ್ ಸರಿದೂಗಿಸಿದ್ದ ಪ್ರಳಯ ಬುದ್ಧಿ ನನ್ನ ಕುಮಾರನದು. ಒಂದಾಣೆ ಕೊಟ್ಟೆ. ಇಸ್ಪೀಟ್ ಕಛೇರಿಗೆ ಹೊರಡುವ ಮುನ್ನ ಭಾನುವಾರ ಮಧ್ಯಾಹ್ನ.

ರಂಗು ಮನೇಲಿ ನಾವು ಸೇರೋದು. ಆ ರೀತಿ ರಂಗೂಗೆ ಇದೊಂದೇ ಚಪಲ. ಇಸ್ಪೇಟು ಅಂತಂದರೆ ಕಿವಿಯಿಂದ ಕಿವಿತನಕ ಹಲ್ಲು ಕಿರೀತಾನೆ. ಅವತ್ತು ಮಧ್ಯಾಹ್ನ. ಅಲ್ಲಿ ಸೇರಿದೆವು ನಾವು ನಾಲ್ಕು ಜನ.

ಒಂದಾಟ ಆಗಿತ್ತು. ರಂಗೂಗೆ ಒಂದು ಟೆಲಿಗ್ರಾಂ ಬಂತು. ಯಾವುದೋ ಒಂದು "ಸ್ವೀಪ್" ಟಿಕೆಟ್ ತೆಗೆದುಕೊಂಡಿದ್ದನಂತೆ. ಅದಕ್ಕೆ ೧೮,೦೦೦ ರೂಪಾಯಿ ಬಂದಿತ್ತಂತೆ.

"ಏನು ರಂಗು ಇಷ್ಟು ಹಣ ಬಂತು. ಏನು ಮಾಡ್ತೀ" ಎಂದೆವು. ನಮ್ಮ ನಮ್ಮ ಹೊಟ್ಟೆ ಉರೀತಾ ಇದ್ದರೂ ನಗುನಗುತಾ ಕೇಳಿದೆವು.

ಆಗ ರಂಗು ಹೇಳಿದ.

"ನೋಡೀಪ್ಪಾ! ಒಂದು 'ಮನೆ' ಮೊದಲು ಬಾಡಿಗೆಗೆ ತೆಗೆದುಕೊಳ್ಳುತ್ತೇನೆ. ಆ ಮೇಲೆ ಎರಡು ಜತೆ ಪಂಚೆ ಕೊಳ್ಳುತ್ತೇನೆ. ಆ ಮೇಲೆ ಕಾಳ ಸಂತೇಲಿ ಒಂದು ವರ್ಷಕ್ಕೆ ಬರೋ ಅಷ್ಟು ಅಕ್ಕಿ ಕೊಂಡು ಈ ಚಪ್ಪಲಿ ಚಪಾತಿ ತಿನ್ನೋದು ತಪ್ಪಿಸಿಕೊಳ್ಳುತ್ತೇನೆ. ಒಂದು ತಿಂಗಳ ಮಟ್ಟಿಗಾದರೂ—ಆಮೇಲೆ ನನ್ನಾಕೇಗೆ ಒಂದು ಸೀರೆ ಕೊಂಡುಕೊಡುತ್ತೇನೆ. ಆ ಮೇಲೂ ಏನಾದರೂ ಹಣ ಮಿಕ್ಕರೆ, ಒಂದು ಛತ್ರಿ ಕೊಂಡುಕೋತೀನಿ ಇನ್ನೂ ಏನಾದರೂ ಮಿಕ್ಕರೆ ನಿಮಗೆಲ್ಲಾ ಹಂಚ್ತೀನಿ ಅಂದ.

ನಮಗೆ ಖುಷಿಯೋ ಖುಷಿ. ಅಷ್ಟು ಹಣ ಬಂದವನಿಗೆ ಇಷ್ಟೇ ಆಶೆ ಇದ್ದರೆ. ನಮಗೂ ಅಲ್ಪ ಸ್ವಲ್ಪ ಖಂಡಿತ ಅಂತ.

ಆದರೆ ಒಂದು ತಿಂಗಳಾದ ಮೇಲೆ ಅವನ ಖರ್ಚಿನ ಪಟ್ಟಿ ನೋಡಿದೆವು.

ಮನೆ ಬಾಡಿಗೆ ನೂರು ರೂಪಾಯಿ. ಮನೆ ಬಾಡಿಗೆಗೆ ಹುಡುಕಿ ಕೊಡಿಸಿದವನಿಗೆ ಸಾವಿರ. ಮನೆ ಮಾಲೀಕನಿಗೆ ಮನೆ ರಿಪೇರಿಗೆ ಅಂತ ಮುಂಗಡ ಮೂರು ಸಾವಿರ. ಎರಡು ಜತೆ ಫಿನ್ಲೆ ಪಂಚೆ ಮೂವತ್ತು ರೂಪಾಯಿ. ಅದನ್ನು ಸರಬರಾಜು ಮಾಡಿದವನಿಗೆ ಮುನ್ನೂರು ರೂಪಾಯಿ. ಒಂದು ವರ್ಷದ ಅಕ್ಕೀಗೆ ಸಾವಿರದೆಂಟನೂರು ರೂಪಾಯಿ. ಪಲ್ಲಾಕ್ಕೆ ನೂರೈವತ್ತರಂತೆ ಹನ್ನೆರಡು ತಿಂಗಳಿಗೆ ಅದನ್ನು ಸರಪರಾಜು ಮಾಡಿದವನಿಗೆ ಸಾವಿರದ ಇನ್ನೂರು. ಆಗಾಡಿ ಹಿಂದೆ ಬಂದಿದ್ದ ಖಾಕಿಧಾರೀಗೆ ಸಾವಿರ ಕೈನಾಲ—ಅವನ ಹೆಸರೂ ಗೊತ್ತಿಲ್ಲ. ನನ್ನಾಕೆಗೆ ಒಂದು ಸೀರೆ ಎಪ್ಪತ್ತು ರೂಪಾಯಿ. ಅದನ್ನು ಹುಡುಕಿ ತರಲು ಮೋಟಾರ್ ಬಾಡಿಗೆ ನೂರು ರೂಪಾಯಿ. ಕುದುರೆ ಜೂಜಿನಲ್ಲಿ ಬಂದ ಹಣ ಅಂತ ಅದರ ಮೇಲೆ ತೆರಿಗೆ ಸರಕಾರದವರು ಕಸುಕೊಂಡಿದ್ದು ಒಂಭತ್ತು ಸಾವಿರ. ಹಣ ತಂದುಕೊಟ್ಟವನಿಗೆ ಇನಾಮು ಇನ್ನೂರು ರೂಪಾಯಿ.

ಕುದುರೆ ಜೂಜಿನಲ್ಲಿ ಹಿಂದಿನ ದಿನಗಳಲ್ಲಿ ಕಳೆದುಕೊಳ್ಳಲು ಮಾಡಿದ ಸಾಲ ಮುನ್ನೂರು ರೂಪಾಯಿ. ತೀರಿಸಬೇಕಾಗಿದ್ದು—ತೀರಿಸಿದ್ದು ೨೦೦. ಬಾಕಿ ನೂರು.

ನಾವೆಲ್ಲಾ ನೇರಿ ಹಣ ಹಾಕಿ ಅವನಿಗೆ ಒಂದು ಛತ್ರಿ ಕೊಂಡುಕೊಟ್ಟೆವು.

ಇವನ ಬಡ್ಜೆಟ್ಟಿಗಿಂತ ನನ್ನ ಕುಮಾರ ಕಂಠೀರವನ ಬಡ್ಜೆಟ್ಟೇ ಸುಖ ಅಲ್ಲವೇ ?

—o—



ಏ ! ಮಾಣಿ ! ಸುಬ್ರಮಾಣಿ ಎಲ್ಲಿ ? !

# "ಬದುಕಿದನಾ ಸುಬ್ಬಣ್ಣ"

---

ಸಂಜೆ—ಮಸುಕು ಮಸುಕು ಬೆಳಕಿನ ಕೊಠಡಿ, ಪಿಸು ಪಿಸು ಮಾತು ಕೇಳಿ ಬರುತ್ತದೆ. ಯಾವುದೋ ಮಹತ್ತರವಾದ ಕಾರ್ಯ ನಿಮಿತ್ತ ಗಾಢವಾಗಿ ಆಲೋಚಿಸುತ್ತಿರುವಂತೆ ತೋರುತ್ತಿತ್ತು. ಸಿಗರೇಟಿನ ಹೊಗೆ, ಬೀಡಿ ಹೊಗೆ ಸರಾಸರಿ ೧:೨ ಪ್ರಮಾಣದಲ್ಲಿ ಬೆರೆತು ಬಾಗಿಲಿಂದ ಹೊರಬರುತ್ತಿತ್ತು. ಅದರ ಮೇಲೆ ಮೂರು ಜನದಲ್ಲಿ ಒಬ್ಬ ಸಿಗರೇಟೂ, ಇನ್ನಿಬ್ಬರು ಬೀಡಿಯನ್ನೂ ಎಳೆಯುತ್ತಿರುವರೆಂದು ಹೇಳಬಹುದು. ಹೊಗೆಯು ಹೊರಹೊಮ್ಮುವಿಕೆ ಅಧಿಕವಾದ ಪ್ರಮಾಣದಲ್ಲಿದ್ದ ಕಾರಣ ವಿಷಯ ಮಹತ್ತರವಾದದ್ದಿರಬೇಕೆಂದು ತರ್ಕಿಸಬಹುದಾಗಿತ್ತು. ಯಾವುದೋ ವ್ಯಕ್ತಿಗಾಗಿ ಕಾತುರತೆಯಿಂದ ಕಾಯುತ್ತಿರುವರೆಂಬುದೂ ಆಗಿಂದಾಗ್ಗೆ ಹೊರಕ್ಕೆ ಬಂದು ನೋಡಿ ಹೋಗುತ್ತಿದ್ದ ವ್ಯಕ್ತಿಯನ್ನು ನೋಡಿ ಹೇಳಬಹುದಾಗಿತ್ತು. ಆ ಆಡುತ್ತಿರುವ ಮಾತುಗಳೇನು? ಎಂದು ಆಲಿಸಿ ಕೇಳಲು "ಹೌದು ಜನ ನಾಯಲಿ ಮತ್ತಿನ್ನೇನು ನಾವು ಏನು ಮಾಡಲಿಕ್ಕೆ ಶಕ್ಯ" ಎಂಬ ಮಂಗಳೂರು ಕನ್ನಡವೂ, "ತೆಗಿರ್ರೀ ಯಾವುನೇನು ಹೇಳೂದು . ಟೊಂಕನೆ ಮುರುದೇನು " ಎಂಬ ಧಾರವಾಡದ ಕನ್ನಡವೂ, "ಅದು ಹೇಗೆ ಸಾಧ್ಯ? ಮಾಡೋ ಪ್ರಯತ್ನ ಮಾಡಬೇಕು " ಎಂಬ ಮೈಸೂರ ಕನ್ನಡವೂ ಕೇಳಿಬರುತ್ತಿತ್ತು. ಆದ್ದರಿಂದ ಅಖಿಲ ಕರ್ನಾಟಕ ಕೂಟವೆಂಬುದು ವೇದ್ಯವಾಗುತ್ತಿತ್ತು.

ಈ ಹೊತ್ತಿಗೆ ಅವಸರದಿಂದ ಸೈಕಲ್ ತುಳಿದು ಬಂದ ಆ ಧಡೂತಿಯಾದ ವ್ಯಕ್ತಿ ಮನೆಯ ಮುಂದೆ ಬರುವುದಕ್ಕೂ ಆ ವತ್ತಡದ ವ್ಯಥೆಯಿಂದಾಗಿ ಹಿಂದಿನ ಗಾಲಿ ರಪೇರ್ ಎಂದು ವಡೆಯುವುದಕ್ಕೂ ಸರಿಹೋಯಿತು. ಆದರೂ ಅದನ್ನು ಲೆಕ್ಕಿಸದೆ ಸೈಕಲ್ ಬಿಸಾಕಿ ಮನೆಯೊಳಕ್ಕೆ ಧಾವಿಸಿದ. ಕೊಂಚ ಸಮಯದಲ್ಲೇ ಹೊರಕ್ಕೆ ಬಂದ, ಹೊಗೆಯು ಸುರುಳಿ ೨:೨ ಪ್ರಮಾಣದಲ್ಲಿ ಬೀಡಿ ಸಿಗರೇಟಿನದಾಗಿತ್ತು. ಆಲಿಸಿ ಕೇಳಲಾಗಿ ಕೆಳಗೆ ಕಂಡ ಸಂಭಾಷಣೆ ಕೇಳಿಬರುತ್ತಿತ್ತು.

"ಪೊಟಾಸಿಯಂ ಸಿಯನೈಡ್—ಕುಣಿಕೆ ಹಾಕಿದ ಹಗ್ಗ—ಆಳವಾದ ಭಾವಿ—ಎರಗಿದ ಸಿಡಿಲು—ಹರಿತವಾದ ಕತ್ತಿ—ಕಿವಿಚಿದ ಕತ್ತು—ಯಾವುದಾದರೂ ಸರಿ ಈ ನರಕದಲ್ಲಿರಲಾರೆ. ಕೇವಲ ಬಾಲಕನಿದ್ದಾಗಿನಿಂದ ನಮ್ಮಜ್ಜ—ನಮ್ಮಪ್ಪ ಮೇಯಿಸಿ ಬೆಳೆಸಿದ ವಸ್ತುವನ್ನು ಬಿಟ್ಟು ಹೇಗೆ ಜೀವಿಸುವುದು....ಗಣ

ಪಯ್ಯ ಬೇಗ ಹೇಳು ಏನು ಏರ್ಪಾಡು ಮಾಡುವಿ ...ನಾಸ್ತಿ ಎಂದರೆ ಹೇಳಿ ಬಿಡು ಸ್ವಸ್ತವಾಗಿ ನೇಣು ಹಗ್ಗ ಹುಡುಕುವ....ಅದಿಲ್ಲದ ಮೇಲೆ....ಇದ್ದೇನು ಸತ್ತೇನು...."

"ನಾನೇನು ಮಾಡಲು ಸಾಧ್ಯ.. .ಹೌದಲ್ಲೋ ಸರ್ಕಾರದ ಆರ್ಡರ್ ಎಂದ ಮೇಲೆ— ಹ್ಯಾಗೆ ಮಾಡುವುದು... ಮತ್ತೆ ನಾನೇನು ಜೈಲು ಹೋಗೋದ... ನೀವು ಹೇಳೋದು. ಆಂ ..."

"... ಬಿಡೋ ನಿನ್ನ....ಗಣಪ್ಪ ಹೇಳೋದು ಕೇಳು ಮಹಾರಾಯ.. ಏನಾರ ಮಾಡಿದಿ ನಾವು ಬಚಾವು ನೋಡು.. ಇಲ್ಲಾಂದ್ರೆ... ನಾವು ಹೆಂಗಪ ಮುಂಡಿ ನಡಸೋದು ?... ನೀನೆ ಹೇಳಪ್ಪ... "

"ಹತ್ತೂ ಜನಕ್ಕೆ... ಅನುಕೂಲ ಮಾಡುವುದೇ ನಮ್ಮ ಗುರಿ... ಅದರಿಂದಾಗಿ ....ಸರ್ಕಾರ ಬೇಡ ಅಂದರೆ ನಾನೇನು ಮಾಡುವುದು...."

"....ಮತ್ತೂ ನಿನ್ನ ಲಾಪಾಯಿಂಟು ತೆಗದೀಂದ್ರ ನೋಡು ಚಲೋ ಕಾಣುದುಲ್ಲ....ನೋಡಪ್ಪ....ಈ ಸುಬ್ಬಣ್ಣನ ಪಾಡು ನೋಡು ದೋಸೆ ಇಲ್ದೆ.... ಅವ ಹೆಂಗ ಬದುಕ್ಯಾನು....ನನ್ನ ಮುಂಡಿ ಹೆಂಗ ನೆಡದೀತು... ಹೋಟಲು ನಿಂತಿತೆ ನೀ ಹೆಂಗ ಬದಕೀಯು....ಇದೆನು ಸಾಧಾರಣ ಸಂಗ್ತಿ ಅಲ್ಲ ಕಣೊ ಮಹರಾಯ... ಏನಾರ ಮಾಡ್ಲಿಕ್ಕೆ ಬೇಕು "

"... ಶಂಕರನ ಹಾಗೆ ಹಾಲಾಹಲ ಕುಡಿದೇನು... ಪ್ರಹ್ಲಾದನ ಹಾಗೆ ಬೆಟ್ಟದಿಂದ ಹಾರೇನು. ಮಾಸ್ತರುಗಳ ಹಾಗೆ ಅರೆಹೊಟ್ಟೆ ಇದ್ದೇನು.. ಸಾವಿರ ಓಲ್ಟು ವಿದ್ಯುತ್ ತಂತಿ ಮೇಲೆ ಮಲಗೇನು.. ಆದರೆ. ಆದರೆ.. ಇದನ್ನ ಬಿಟ್ಟು ಹೇಗೆ ಜೀವಿಸಲಿ. ರುದ್ರಪ್ಪ ನಾಗಪ್ಪಯ್ಯ. . ದಯತೋರಿ . ದಯತೋರಿ .. "

"ನೋಡಪ... ನಾಗಪ್ಪಯ್ಯ ಅವನ ಗೋಳು ನೋಡು ಆ ಸುಬ್ಬಣ್ಣನ ಗೋಳು ನೋಡು... ಆ ಪಾಪಿ ಹೊಟ್ಟೆ ನೋಡಿ ಏನಾರ ಮಾಡು ಮಹಾರಾಯ .. ."

"....ಮಾಣಿ ಆ ಪಟ್ಣ ಕೊಂಡೊಯ್ದು ಕೊಟ್ಟೆಯಾ ಹೇಗೆ ! .. ಅವರೇನೂ ಹೇಳಲಿಲ್ಲವೆ ?...."

"ಮೊದಲು ಮನೆಲಿಲ್ಲಾಂದ್ರು....ಆ ಮೇಲೆ ಪೊಟ್ಣದಲ್ಲಿನ ಸಾಮಗ್ರಿ ವಾಸನೆ ಹೊಡೆದಿರಬೇಕು . 'ಇದ್ದೀನಿ' ಎಂದು ಬಂದು ಸರಸರನೆ ತಿಂದು ತೇಗಿ

ನೀರು ಕುಡಿದು 'ಕಡೆಯ ಮಸಾಲೆ ಮುಕ್ತಿ ಮುಕ್ತಿ' ಎಂದು ಬೆಣ್ಣೆಯಾದ ಬೆರಳು ನೆಕ್ಕಿದರು "

"ಪಾಪಿ . ಆರ್ಡರು ತೆಗೆಯೊ ಮಾತಾಡಲಿಲ್ಲವೊ ? "

"ಅವರ ಮಡದಿ ಮಗ್ಗುಲಲ್ಲೇ ನಿಂತಿದ್ದರು 'ನೋಡು ನಾಗಪ್ಪಯ್ಯನ ಮಸಾಲೆ ಹೇಗಿದೆ ನಾಳೆನಿಂದ ಮನೇಲಿ ನೀನೂ ಹೀಗೆ ಹೊಯ್ಯಬೇಕು .' ಎಂದರು."

"ಪಾಪಿ . ಎಂಥಾ ಆಫೀಸರು ಅದು. ಮಸಾಲೆ ತಿಂದ ಮನೆಗೆ ಮಣ್ಣೆರಚೋ ಯೋಜನ.. ."

"ಅವರೇನು ಮಾಡ್ತಾರಪಾ . ಸರಕಾರ ಆರ್ಡರ ಕೊಡೊಂತಪ ಅವರು ಕೊಟ್ಟಾರಾ .. ಸುಮ್ಮಗೆ ಅವರಿಗೆ ಮಸಾಲಿ ಮೆಯಿಸಿ ತಿಂದರೂ ತಿಂದರೊಂತ ವದ್ಯಾಡಿದರೆ ಹೆಂಗಪಾ ? ನೀನೇ ಹೇಳು ನಾಗಪ್ಪಯ್ಯ ನಾ ಹೇಳೋದು ಖರೇಂತ ತಿಳಿ ನಿನ್ನ ಆ ಸಂದಿ ಮನಿ ನೆಲಮಾಳಿಗಿ ಅದೂ ಇಲ್ಲೂ ಅಲ್ಲೇನಾರ ಯಾರ ಸುಳಿವಿಗೂ ಬೀಳಧಂಗೆ ಏನಾರ ದಂಧೆ ನಡೆಸಬೇಕು ನೋಡಪ .. "

"ರುದ್ರಪ್ಪ....ಅಕ್ಕಿ !... "

" ಅಕ್ಕಿ ಕಾಳಜಿ ಬಿಡೂ ಮಹರಾಯ .. ನಾನಿರೋ ತನಕ ಅಕ್ಕಿ ಚಿಂತಿ ಮಾಡಬ್ಯಾಡ .. ಸುಬ್ಬಣ್ಣ ಇರೋ ತನಕ ಮಸಾಲಿ ಗಿರಾಕಿಗೆ ವದ್ಯಾಡಬ್ಯಾಡ ... ತಿಳೀತೋ ಇಲ್ಲೋ... "

"ಶ್ರೀರಾಮ ರಕ್ಷೆ....ಹಾಲು ಜೇನಿನ ಮಳೆ ಬಂದಹಾಗಾಯಿತು ..ಮಲ್ಲಿಗೆ ವಾಸನೆ....ದೇವರು....ನಿನಗೂ ರುದ್ರಪ್ಪನಿಗೂ ಆಯುರಾರೋಗ್ಯ ಐಶ್ವರ್ಯ ... ಕೊಟ್ಟು ಕಾಪಾಡಲಿ ...ಮೊದಲು ನೆಲಮಾಳಿಗೆ ದಾರಿ ತೋರಿಸಿ .."

"ಹಂಗಾರ ಎರಡು ಮೂಟೆ ಕಳಸಲಾ "

"ಕಳಿಸಪ್ಪಾ....ಇನ್ನೇನು ಮಾಡೋದು .. ಈ ಸುಬ್ಬಣ್ಣನ ಕಾಟ"

ಸಭೆ ಚದುರಿತು. ಮರುದಿನ ನಾನು ಚಾಡುಹಿಡಿದು ನೆಲಮಾಳಿಗೆ ಮನೆ ಹೊಕ್ಕಾಗ....ಆರ್ಡರ್ ಮಾಡೋ ಅಫೀಸರಿಂದ ಪಾಠ ಹೇಳೋ ಪಾಪಿಗಳ ವರೆಗೆ....ಇರುವೆಯಂತೆ ಸಾಲು ಹಿಡಿದು ಕ್ಯೂ ನಿಂತಿದ್ದರು ನಾಗಪ್ಪಯ್ಯನ

ನೆಲಮಾಳಿಗೆ ಮನೆ ಮುಂದೆ ಹನ್ನೆರಡು ಮಸಾಲೆ ತಿಂದು ಸುಸ್ತಾಗಿ ಹೊರ ಬಿದ್ದ ಬೆಣ್ಣೆ ಮಸಾಲ ಎರಡು ಒಟ್ಟಿಗೆ ನಾಲಕ್ಕು ಎಂಬ ಹಾಗೆಯೆ ಕಂಚು ಕಂಠಿ ಪಿಸುಮಾತಾಗಿ ಹೊರಬಿತ್ತು ಸಾಗಲಿ ರಥ ಜರುಗಲಿ ಪಥ ಎಂತೆಂಥ ಆಜ್ಞೆ ಬಂತು ಆದರೂ ಸಾಗಿದೆ ರಥ ಕೆಲರು ಕಪ್ಪು ವ್ಯಾಪಾರವೆಂದರು ಕೆಲರು ಕಳ್ಳವಾಲೆಂದರು ಅಂದರೇನಂತೆ ಎಂದುರೋ ಹುಹಾಸುಹಾವಲು ತಿಂದರೇ ಅವರ ರುಚಿ ಕಂಡಾರು ಭರದಿಂದ ಸಾಗಿದೆ ನಾಗಪ್ಪಯ್ಯನ ನೆಲಮಾಳಿಗೆಯ ಮಸಾಲ ದೋಸೆ ವ್ಯಾಪಾರ. ಬಾಳ್ಗೆ ಗೆಲ್ಗೆ ದೋಸ ದಾತರ್.

— ದಾಶರಥಿ ದೀಕ್ಷಿತ್.

—o—




ಚೀನಾದಲ್ಲಿ ಕೊಕ್ಕಾಟ.

# "ಕೊರವನ ಸಿಂಹಾವಲೋಕನ"

——

ನಮ್ಮ ಭಾರತದ ಪ್ರಧಾನಿ ಜಪಾನಿನ ಮಕ್ಕಳಿಗೆ ಅಂತ ಒಂದು ಆನೆ ಕಳುಹಿಸಿಕೊಟ್ಟರು ಗೊತ್ತೆ? ಇದು ಒಳ್ಳೆ ಯೋಚನೆ ಕಣಯ್ಯಾ! ಪಟೇಲ್ ಮೆನನ್ ಇವರ ತರಾತುರಿಯಲ್ಲಿ ಬೇಕಾದ ಹಾಗೆ ಬಿಳೀ ಆನೆಗಳು ಸಿಗುತ್ತವೆ ಇದರ ವಿಲೇವಾರಿ ಹೇಗಪ್ಪಾ ಅಂತಿದ್ದೆ. ಈಗ ಒಂದು ಮಾರ್ಗ ಸಿಕ್ಕಿತು ಎಂದ ಕೊರವ ಎಲೆ ಅಡಿಕೆ ಜಗಿಯುತ್ತಾ.

*　　　*　　　*

ಇನ್ನೊಂದೆರಡು ವಿಳ್ಳೇದೆಲೆ ಕೊಡು ಚೆನ್ನಾಗಿದೆ ಎಂದ ಕೊರವ. ಸುಣ್ಣ ಹಚ್ಚುತ್ತಾ ಹೇಳಿದ. ಈ ಎಲೆ ನೋಡು. ಎಲ್ಲೋ ಕೆರೆ ಅಂಗಳದಲ್ಲಿ ಬೆಳೆದ ಹಾಗಿದೆ ರುಚಿ ನೋಡಿದರೆ—ಅಂದ.

"ಕೆರೆ ಅಂಗಳ ಅಂದರೆ ಜ್ಞಾಪಕ ಬಂತು. ಈ ಸಣ್ಣ ಪುಟ್ಟ ಕೆರೆ ಅಂಗಳ ದಲ್ಲೆಲ್ಲಾ ಈಗ ಬೆಳೆ ಬೆಳೀತಾ ಇದ್ದಾರೆ. ಏಸಿಲ್ಲಾ ಅಂದರೂ ಲಕ್ಷಾಂತರ ಎಕರೆ ಹೀಗೆ ಸಾಗುವಳಿ ಆಗ್ತಾ ಇದೆ. ಇವುಗಳ ದುರಸ್ತಿಗೆ ಅಂತ ಹೇರಳವಾಗಿ ಹಣ ಖರ್ಚುಮಾಡಿದರೆ ಕೆರೇಲಿ ಬೆಳೆ ಇರುಲ್ಲ. ಬರಿ ನೀರು ತುಂಬಿಕೊಂಡು ಬಿಡುತ್ತೆ ಹೋಗಲಿ ಬಿಡು. ನೀರಾದರೂ ಕುಡಿದುಕೊಂಡು ಇರಬಹುದು." ಅಂದ

*　　　*　　　*

"ಬಹಳ ಶಹಣೆ ಇದ್ದಾರಪ್ಪಾ" ಅಂತಂದ ಕೊರವ ಯಾರು? ಯಾಕೆ? ಅಂತ ನಾವೆಲ್ಲಾ ಅವನ ಕಡೆಗೇ ಬೀಡಿ ಹೊಗೆ ಬಿಡುತ್ತಾ ನೋಡಿದೆವು. ಸ್ವಲ್ಪ ಕೆಮ್ಮಿ ನಂತರ ಹೇಳಿದ "ಈಗ ನೋಡಪಾ! ಈ ಸಂಸ್ಥಾನಗಳೂ ಭಾರತ ಸರ್ಕಾರವೂ ಒಂದಾಗತ್ತೈತಿ. ಹಣಕಾಸಿನ ವಿಚಾರದಲ್ಲಿ ಬೇಗಲೇ ಆಗ್ತೈತಿ ಅಂದವಾಗೆ ನಮ್ಮ ಹತ್ತಿರ ಹೆಚ್ಚು ಹಣ ನಿಧಿ ಕೂಡಿಸಿಟ್ಟರೆ ಅವರಿಗೇ ಹೋಗ್ತೈತಿ ಅಲ್ಲವೋ? ಅದರ ಬದಲು ನಿಧೀನೆಲ್ಲಾ ನಮ್ಮ ನಮಗೋಸ್ಕರವೇ ಬೇಗ ಖರ್ಚು ಮಾಡಿಬಿಟ್ಟರೆ ಬೊಕ್ಕಸ ಬೊಕ್ಕಸ ಒಂದಾಗೋವಾಗ ನಮಗೇ ಅಲ್ಲವೇ ಮೋಜು"

ನಮಗೇನೂ ಇದರ ಮರ್ಮ ಪತ್ತೀನೇ ಹಚ್ಚಲಿಲ್ಲ ಅನ್ನಿ.

* * *

"ಭಲೆ! ಭೇಷ್! ಎಂದರಚಿದ ಕೊರವ." ಯಾಕಲಾ ಈಗ ತಾನೆ ಚೆನ್ನಾಗಿದ್ದೆಯಲ್ಲಾ! ಏನು ಬಂತಲಾ" ಎಂದೆವು, ಕಡ್ಡೀಪುಡಿ ಹಂಚಿಕೊಳ್ಳುತ್ತಾ.

ಆಗಂದ "ನೋಡವಾ! ಕಲಿತ ಮಂದಿ ಕೆಲಸ ಇಲ್ಲದೆ ಊರು ತುಂಬಾ ಶೋಕರು ಹೊಡೀತವೆ. ಕೈ ಕೆಲಸ ಕಲಿತಿಲ್ಲ, ತಲೀ ಕೆಲಸ ಸಿಗುಲ್ಲ. ಅಂತಾಗಿ ಸುತ್ತಾಡ್ತವೆ. ಇದಕ್ಕೆ ಉಪಾಯ ನಮ್ಮೋರು ಪಸಂದಾಗಿ ಮಾಡಿದ್ದಾರೆ. ಈಗ ಕೊಲೇಜಲ್ಲಿ ನೂರಕ್ಕೆ ಐವತ್ತರಂತೇ ಹುಡುಗರನ್ನ ಸೇರಿಸ್ತಾರಂತ. ಅಂದ ಮ್ಯಾಗೆ ಕಲಿತವರು ಕಡಿಮೆ. ಅವರ ಗೋಳೂ ಕಡಿಮಿ ಅಲ್ಲವಾ!

—— o ——



ಅಹಾ ಶಾಸ್ತ್ರಿಗಳೇ! ಇಂಥಾ ಹಸು ದಾನ ಕೊಟ್ಟಿದ್ದಾರಲ್ಲ!
ಇದರಿಂದ ಪಿತೃಗಳು ವೈತರಣಿ ದಾಟಲಿಕ್ಕೆ ಆಗುತ್ತೆ?



# ನವೀನ ಗಾದೆಗಳು



(ಸೀಟಿನ ಬೇಟೆ)

ಉತ್ತು ಬಾಳೋದು ಮರೆತು ಅತ್ತು ಬಾಳೋದು ಕಲಿತ.

ಊರೆಲ್ಲ ನಂಟರು, ಕೂರೋಕೆ ತಾವಿಲ್ಲ.

ನಂಬರ್ ತೋರಿಸಿ ಅವಲಕ್ಷಣ ಅನ್ನಿಸಿಕೊಂಡ.

ದೇಹ ಇರುವವರೆಗೂ ದೇಹಿ ಅನ್ನೋದೆ.

ಮುಂದೇನು ಮಾಡುತ್ತಿಯಾ ಅಂದ್ರೆ ನೂಕಿದಕಡೆ ನುಗ್ಗುತ್ತೇನೆ, ಅಂದ.

ಗಿಣಿಯಹಾಗೆ ಸಾಕಿ, ಲಕ್ಕಿನ ಬಾಯಿಗೆ ಕೊಟ್ಟಹಾಗೆ

ಗೆದ್ದೋನು ಸೀಟು ಹುಡುಕಿದ, ಸೋತೋನು ಸೂಟು ಹೊಲಿಸಿಕೊಂಡ

ಅಲ್ಲೀ ಓದ್ತೇನೆ, ಕದ ತೆಗಿಯಿರೋ

ಪಾಸಿಗೆ ರಾಜಯೋಗ, ಸೀಟಿಗೆ ದರಿದ್ರ ಜಾತಕ.



ಬಸ್ಸು ಇಳಿದರೂ ಕೈ ಇಳಿಯುಲ್ಲವಲ್ಲ !!

# ಅನುಮಾನ

ಅವರಿಬ್ಬರೂ ನಮ್ಮ ಗಾಡಿಯೊಳಕ್ಕೆ ಬಂದಾಗಲೇ, ನನಗೆ ಅನುಮಾನ ವಾಯಿತು ಅವಳ ಕೈಯಿಂದ ಚೀಲಗಳನ್ನು ತೆಗೆದುಕೊಂಡು ಆತ ಮೇಲಿನ ಹಲಗೆಯಲ್ಲಿರಿಸಿದ ರೀತಿ, ಅವರಿಬ್ಬರೂ ಪರಸ್ಪರ ಮಾತಾಡದೆ, ಕಣ್ಣ ಸನ್ನೆ ಗಳನ್ನೂ ಬಹಿಷ್ಕರಿಸಿ, ಶಿಲೆಯಂತೆ, ಕುಳಿತಿದ್ದ ರೀತಿ—ವಾತಾವರಣ, ಏಕೋ, ಸರಿಬೀಳಲಿಲ್ಲ. ಉದ್ದಕ್ಕೂ ನಾನು ಎರಡು ಕಣ್ಣುಗಳಿಂದಲೂ ಆ ಇಬ್ಬರನ್ನೇ ದುರದುರನೆ ನೋಡುತ್ತಾ ಇದ್ದೆ. ಆಗಾಗ, ನನ್ನ ದೃಷ್ಟಿ ಆತನ ದೃಷ್ಟಿ ತಾಕಿತು. ಆದರೆ, ಆತ ಧಟಕ್ಕನೆ ಕಿಟಕಿಯಾಚೆಗೆ ತಲೆಯನ್ನು ತಿರುಗಿಸಿಬಿಡುತ್ತಿದ್ದ.

ಆಕೆಯಂತೂ, ಕೇವಲ ಹೆದರಿದ ಜಿಂಕೆ; ಮನುಷ್ಯ ಮುಟ್ಟಿದ ಗುಬ್ಬಿ; ಮಹಾ ಭೀತಳು. ಎಂದೂ ರೈಲು ಹತ್ತದೆ ಇದ್ದವಳಂತೆ, ಜನಸಂದಣಿಯಲ್ಲಿ ಬಾಡಿಹೋಗುವ ಹೂವಿನಂತೆ, ಯಾವುದೋ ಊರಿಗೆ ಬಲಾತ್ಕಾರವಾಗಿ ಯಾವನೋ ಘಾತುಕ ಸಾಗಿಸುತ್ತಿರುವ ಪಶುವಿನಂತೆ, ಕಂಡಳು. ನನ್ನ ಕರುಳು ಬಹು ಮೃದು, ಹೆಣ್ಣಿನ ಬಾಳು ಕಣ್ಣೀರು ಎಂಬುದನ್ನು ನೆನೆದರೆ ನನ್ನ ಕಣ್ಣಲ್ಲಿ ನೀರು ಬಂದುಬಿಡುವುದು; ಅಷ್ಟು ಮೃದು. ಪಾಪ! ಆಕೆ ನಡುನಡುಗುತ್ತ ಕುಳಿತಿದ್ದಳು, ಹಣೆಯ ಮೇಲೆ ಸಾಲಾಗಿ ಬೆವರ ಹನಿಗಳು; ತೆಳ್ಳನೆಯ ಬೆಳ್ಳನೆಯ ಮೈ; ಅನೀಮಿಯದ ಆರಂಭ ಚಿಹ್ನೆಗಳು.

ಅವಳನ್ನು ಬಲಾತ್ಕಾರದಿಂದ ಸಾಗಿಸುತ್ತಿದ್ದ ಆತ, ನನ್ನ ಕಣ್ಣಿಗೆ ಥೇಟ್ ರಾಕ್ಷಸನ ಹಾಗೆ ಕಂಡ. ಚಾಕು ಚಕ್ಷುಗಳು! ಗಾಯದಂತೆ ಬಾಯಿ! ಗೂನು ಬೆನ್ನು.. ಕೆಂಪು ವಸ್ತ್ರ.

ಆಗ ಹೊಳೆಯಿತು, ನನಗೆ ಅವರಿಬ್ಬರ ಗುಟ್ಟು. ಆತ ಆಕೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾನೆ. ಹೇಗಿದ್ದರೂ, ಮದುವೆ ಲಗ್ನಕಾಲ. ಹುಡುಗೀನ ಯಾರಿಗೋ ಕೊಟ್ಟು ಮದುವೆ ಮಾಡಲು ತಾಯಿ ತಂದೆಯರು ಏರ್ಪಾಟು ಮಾಡಿದ್ದರು. ಈತ ಅದೇ ಊರಿನ ಪೋಕರಿ. ವರಪೂಜೆ ಮೆರವಣಿಗೆಯಾಗುತ್ತಿರುವಾಗ, ಹೊಂಚು ಹಾಕಿ, ಜಟಕಾದಲ್ಲಿ ಕೂರಿಸಿ, ಹಾರಿಸಿ ತಂದಿದ್ದಾನೆ. ಅದಕ್ಕೋಸ್ಕರವೇ ಅವರು ದೊಡ್ಡ ಸ್ಟೇಷನ್‌ನಲ್ಲಿ ರೈಲು ಹತ್ತದೆ, ಈ ಕೊಂಪೆಗೆ ಬಂದದ್ದು. ಇಲ್ಲಾದರೆ, ಆತನಿಗೆ ಗುರುತಾದವರು ಒಬ್ಬರೂ ಸಿಕ್ಕುವುದಿಲ್ಲ, ಅಂತ.

ಆದ್ದರಿಂದಲೇ ಪಾಪ, ಆಕೆ ಕಣ್ಣು ಅಷ್ಟು ಕೆಂಪಾಗಿರುವುದು—ಅತ್ತು

ತ್ತು. ಹಸಿವು ದಾಹ ಬಹಳ ಆಗಿತ್ತು. ಏಕೆಂದರೆ, ಆಕೆ ನಿಮಿಷಕ್ಕೊಂದಾವರ್ತಿ ಅಲ್ಲೇ ಮೂಲೆಯಲ್ಲಿದ್ದ ಮಾವಿನ ಹಣ್ಣಿನ ಬುಟ್ಟಿಯನ್ನೇ ನೋಡುತ್ತಿದ್ದಳು. ಆ ಹಿಂಸ ಜಂತು ಅವಳಿಗೆ ದಾರಿಯಲ್ಲಿ ಒಂದು ಒಟ್ಟಲು ಕಾಫೀನೂ ಕೊಟ್ಟಿರಲಾರ. ಪರಿಚಯಸ್ಥರು ಕಂಡುಹಿಡಿದಾರು, ಎಂಬ ಭಯ. ಎಲಾ ಕೇಡಿ! ಗಂಡ ಹೆಂಡಿರಾದರೆ, ಸರಸ ಆಡಬೇಕು, ಅಣ್ಣ ತಂಗಿಯರಾದರೆ,—ಛೆ! ಹೀಗಿರುತ್ತಾರೆಯೇ? ಆತನ ಮೋರೆಗೂ ಆಕೆಯ ಮುಖಕ್ಕೂ ಜನ್ಮಾಂತರದ ಸಂಬಂಧವೇ ಇಲ್ಲ.

ಅವನು ಏನು ಕೇಳಿದರೂ, ಅವಳು ಅದಕ್ಕುತ್ತರವಾಗಿ, ತಲೆ ಆಡಿಸುತ್ತಿದ್ದಾಳೆ, ಅಷ್ಟೆ! ಏಕೆ? ಮಾತಿಗೆ ಹಿಂತೆಗೆಯುವ ಹೆಂಗಸೂ ಉಂಟೆ, ಜಗತ್ತಿನಲ್ಲಿ? ನನಗೆ ಭಯವಾಯಿತು. ಯೋಚಿಸುವುದಕ್ಕೂ ಕೂಡ ಅಂಜಿಕೆ.... ಚಂಡಾಲ ಏನಾದರೂ ಹುಡುಗಿ ನಾಲಿಗೆಯನ್ನು ಕತ್ತರಿಸಿಬಿಟ್ಟಿದಾನೆಯೇ? ಅಥವಾ, ಮದ್ದು ಕುಡಿಸಿ, ಮೂಗಿಯಾಗಿಸಿದಾನೊ? ಬಲ್ಲವರಾರು? ಅನಾಥೆ ಹೆಂಗಸರು ಕ್ರೂರ ಮಾನವನ ದೆಸೆಯಿಂದ ನಮ್ಮ ದೇಶದಲ್ಲಿ ಸಹಿಸುತ್ತಿರುವ ಚಿತ್ರಹಿಂಸೆಗೆ ಲೆಕ್ಕವೇ ಇಲ್ಲ.......

ಅರಸಿಕೆರೆ ಸ್ಟೇಷನ್‌ನಲ್ಲಿ ಅವರಿಬ್ಬರೂ ಇಳಿದರು. ನಾನು ಮುಂದಕ್ಕೆ ಬೀರೂರಿಗೆ ಹೋಗುವವನಿದ್ದೆ. ಆದರೂ, ಸಮಾಜ ಸೇವಾ ಧುರೀಣತೆ, ಮಹಿಳಾ ಮಾನ ಸಂರಕ್ಷಣಾ ಕುತೂಹಲದಿಂದ, ನಾನು ಅಲ್ಲೇ ಇಳಿದೆ. ಅವರನ್ನು ಹಿಂಬಾಲಿಸಿದೆ. ಅಲ್ಲೇ ನನ್ನ ಚಿಕ್ಕಪ್ಪನ ಅಳಿಯನ ಅಣ್ಣ ಪೋಲೀಸ್ ಕೆಲಸದಲ್ಲಿದ್ದ. ದೇವರ ದಯೆ, ಅವನು ನಿಲ್ದಾಣದಲ್ಲೇ ಸಿಕ್ಕಿದ. ಮೆತ್ತಗೆ, ಅವನ ಹತ್ತಿರ ಹೋಗಿ, "ಬಾ! ಒಂದು ಕೇಸು ಕೊಡುತ್ತೇನೆ, ನಿನಗೆ! ಸೆಷನ್ ಕೇಸು!" ಎಂದು ರುಚಿ ತೋರಿಸಿ, ಅವನನ್ನು ಎಳೆದು ತಂದು, ಆ ರಾಕ್ಷಸನ ಪಕ್ಕದಲ್ಲಿ ನಿಲ್ಲಿಸಿದೆ. ಹೆಗಲ ಮೇಲೆ, ಕೈ ಇಟ್ಟ. ಆಸಾಮಿ ಹಿಂತಿರುಗಿ ವಿಕಾರವಾಗಿ ಹಲ್ಲು ಕಿರಿದ.

"ಓ ಹೊ ಹೊ! ಏನಯ್ಯಾ, ಸೋಮು!" ಎಂದು ಪೋಲೀಸ್‌ನವ ಆತನ ಭುಜ ತಟ್ಟಿದ. ನನ್ನ ಕಡೆ ತಿರುಗಿ, "ಇವನು ನನ್ನ ತಮ್ಮನ ಭಾವ ಮೈದುನ.. . ಅಂದರೆ, ಅಷ್ಟು ಬಳಸು ಯಾಕೆ? ನಿಮ್ಮ ಚಿಕ್ಕಪ್ಪನ ಮಗ .. . ಯುದ್ಧಕ್ಕೆ ಹೋಗಿದ್ದ... ... ಕಾಶ್ಮೀರಕ್ಕೆ. ಆದ್ದರಿಂದಲೇ ಹೀಗಾದ. ಅಲ್ಲಿಂದ ಯಾವಾಗ ಬಂದೆ, ಸೋಮು? ಅಂತೂ, ನೋಡಪ್ಪ, ನೀನು ಬದುಕಿ ಬಂದದ್ದು ಈಕೆಯ ತಾಳಿ, ಭಾಗ್ಯ....... "

— ಗಂಗಾಧರ.

—— o ——

# ವೇದಾಂತದ ಮುಲಾಮು

ನಮ್ಮ ರಾಮೂಗೆ ಈ ಸಲವೂ ಹೋಗಿಬಿಡ್ತು. ಅವತ್ತು ಅವನು ಮನೆಗೆ ಬಂದದ್ದೇ ಹೆಚ್ಚು. ಮನೆಯಲ್ಲಿ ಎಲ್ಲರಿಗೂ ಅವನ ಮೇಲೆ ಕೋಪ. ಕವಳ ಧ್ವಂಸಮಾಡೋಕೆ ಒರುತ್ತೆ. ತಲೆ ತುಂಬ ಮಣ್ಣು, ಶುದ್ಧ ಪೋಂಭೇರಿ, ಬೀದಿ ಬೀದಿ ಅಲೆಯುತ್ತಾನೆ, ಕೆಂಪೇಗೌಡ ರಸ್ತೆಯೇ ಇವನಿಗೆ ಕಾಲೇಜು, ಎಂದೆಲ್ಲ ಅಪ್ಪ ಯದ್ವಾ ತದ್ವಾ ಒಯ್ಯುತ್ತಾ ಇದ್ದರು. ಅವರ ಸಂಕಟ ಅವರಿಗೆ ಗೊತ್ತು. ಅವರಿಗೆ ತುಂಬಾ ಗುರುತಿದ್ದ ದೊಡ್ಡಮನುಷ್ಯರೊಬ್ಬರು ರಾಮೂಗೆ ಒಂದು ಚಾಕರಿ ಕೊಡುತ್ತೇನೆ ಅಂತ ಮಾತು ಕೊಟ್ಟಿದ್ದರಂತೆ. ಅವರ ಅಧಿಕಾರ ಇನ್ನೇನು ಒಂದೆರಡು ವಾರಗಳಲ್ಲಿ ಕೈಜಾರಿಬಿಡುತ್ತದಂತೆ. ಗಾಳಿ ಇರುವಾಗಲೇ ಕೆಲಸಕ್ಕೆ ತೂರಿಕೊಳ್ಳಬೇಡವೆ? ಈ ಅವಲಕ್ಷಣದ ಮೂತೀನ ಅವರೆದುರು ನಾನು ಹೇಗೆ ಹಿಡಿದು ತೋರಿಸಲಿ?—ಅಂತ ಅಪ್ಪ ಪೇಚಾಡಿದ. ಅಮ್ಮ ಕೂಡ, ಇಂಥ ಅನ್ಯಾಯ ಉಂಟೆ? ಮದುವೆ ಲಗ್ನಗಳೆಲ್ಲ ಮುಗಿದಮೇಲೆ ಪರೀಕ್ಷೆ ಫಲಿತಾಂಶ ಹೊರಬೀಳಿಸಬಾರದೆ, ಕಾಲೇಜಿನವರು? ಅವರಿಗೂ ಮಕ್ಕಳು ಮರಿ ಮದುವೆ ಮುಂಜಿ ತಾಪತ್ರಯ ಇಲ್ಲವೆ? ನಾಳೆ ಬೆಳಗ್ಗೆ ತಮ್ಮಣ್ಣಯ್ಯನವರು ಹುಡುಗೀನ್ನೂ ಕರೆದುಕೊಂಡು ಬರ್ತೀವಿ ಅಂತ ಹೇಳಿ ಹೋಗಿರುವಾಗ, ಅಂಥ ದಿನವೇ ಆರಿಸಬೇಕೆ ಆಫೀಸಿನವರು? ಒಂದು ತಿಂಗಳು ತಡಮಾಡಿದರೆ ಏನು ಮಹಾ ಕೊಳ್ಳೆ ಹೋಗೋದು?—ಅಂತ ಅವಳು ಗೋಳಾಡಿದಳು.

ಆದರೆ, ಅಜ್ಜಿ, ಪಾಪ, ಬಾಗಿಲು ತೆಗೆದು, ರಾಮೂನ ಒಳಕ್ಕೆ ಕರೆದಳು. ಅವಳ ವೇದಾಂತದಿಂದ ಎಲ್ಲರ ಕೋಪಾನ್ನೂ ಅಡಗಿಸಿದಳು "ಇಲ್ಲಿ ಕೇಳ್ರಪ್ಪ! ಎಲ್ಲಾ ಹಣೆಯಬರಹ, ದೇವರಿಚ್ಛೆ! ಅವನು ಫಯಿಲಾಗಬೇಕು ಅಂತ ಬ್ರಂಹ್ಮ ಬರೆದಿರೋವಾಗ, ಅವನು ಎಷ್ಟು ಓದಿದರೇನು? ಎಷ್ಟು ಮುದ್ದಾಗಿ ಬರೆದರೇನು? ಆ ಮೇಷ್ಟ್ರುಗಳು ಗೂಡೆ ಗೂಡೆ ನಂಬರ್ ಚೆಲ್ಲಿದರೇನು? ಅವನು ಪಾಸಾಗ್ತಾನೆಯೆ? ಊಹುಂ! ಮೇಲೆ ಕೂತಿರೋನ ಇಚ್ಛೇನೇ ನಡೆಯುತ್ತೆ. ರಾಮೂ ಒಂದು ಕಡೆ, ಅವನೊಂದು ಕಡೆ, ಎಲ್ಲಿಂದೆಲ್ಲಿಗೆ ಪಾಪ?. ತಮ್ಮಣ್ಣಯ್ಯನವರ ಹುಡುಗಿ ನಮ್ಮ ಮನೆಗೆ ಬರಬಾರದು ಅಂತ ಅವನ ಇಚ್ಛೆ! ನೀನು ಕೂರಿಸೋ ಜಾಗದಲ್ಲಿ ಅವನಿಗೆ ಅನ್ನದ ಋಣವಿಲ್ಲ, ಮತ್ತೆ ಹೇಗೆ ಅವನು ಪಾಸಾದಾನು?" ಅಂತ ಅಜ್ಜಿ ವಾದಿಸಿದಳು.

ಅಪ್ಪ ಅವಾಕ್ಕಾದ. ಅಮ್ಮನೂ ಕೂಡ, ಹೌದು, ಅಂದಳು. ನಗು ನಗ್ತಾನೇ ರಾಮು ಅಡಿಗೆ ಮನೆಗೆ ನುಗ್ಗಿದ.

—ರುದ್ರಮ್ಮ.

—— o —— ——

## ಆಡಳಿತ ಭಾಷೆ

— o —

ಪ್ರಜಾ ಸರ್ಕಾರ ಜಯಪ್ರದವಾಗಿ ಜರುಗಬೇಕಾದರೆ, ಆಡಳಿತ ಸೂತ್ರವನ್ನು ವಹಿಸುತ್ತಿರುವ ಜನನಾಯಕರಿಗೂ, ಆಡಳಿಸಿಕೊಳ್ಳುತ್ತಿರುವ ಜನಸಮುದಾಯಕ್ಕೂ ಸಂಪೂರ್ಣ ಸಾಮರಸ್ಯ ಇರಬೇಕಾದದ್ದು ಅಗತ್ಯ. ಜನನಾಯಕರು ಹೇಳುತ್ತಿರುವ ಮಾತುಗಳಿಗೆಲ್ಲ ಜನಸಮುದಾಯ ಬೇರೆ ಬೇರೆ ವ್ಯತಿರಿಕ್ತವಾದ ಅರ್ಥಗಳನ್ನು ಕಲ್ಪಿಸಿಕೊಂಡರೆ, ಈ ಸಾಮರಸ್ಯ ಮೊಳಕೆಯಾಗುವುದೇ ಇಲ್ಲ. ಉದಾಹರಣೆಗೆ, ಯಾವ ಕಾರ್ಯಕ್ರಮ ತೆಗೆದುಕೊಳ್ಳಬೇಕು, ಎಂದು ತೋಚದೆ ಇದ್ದಾಗ, ನಾಯಕರು, "ಮಹಾತ್ಮಾ ಗಾಂಧಿಯವರ ಉಪದೇಶಾಮೃತವೇ ನಮಗೆ ಸಂಜೀವಿನಿ; ಅದೇ ದೇಶೋದ್ಧಾರಕ್ಕೆ ಸಿದ್ಧೌಷಧ; ಅದರಂತೆ, ಸೂಕ್ತ ಕಾರ್ಯಕ್ರಮವನ್ನು ಕೂಲಂಕಷವಾಗಿ ಪರ್ಯಾಲೋಚಿಸಿ, ಜಾರಿಗೆ ತರಲಾಗುವುದು" ಎನ್ನುತ್ತಾರೆ. ಅದನ್ನು ಕೇಳಿದವರು ಆ ಮಾತುಗಳ ಅರ್ಥವನ್ನು ತಿಳಿದುಕೊಳ್ಳಲಾರದೆ, ಮತ್ತೆ ಮತ್ತೆ ಟೀಕಿಸಿದರೆ, ಸಾಮರಸ್ಯ ಹೇಗೆ ಬೆಳದೀತು? ಏನೂ ಸಾಧ್ಯವಾಗುವುದಿಲ್ಲ, ಎಂಬ ಸಂದರ್ಭದಲ್ಲಿ, "ಸಾಧ್ಯವಾದದ್ದನ್ನೆಲ್ಲ ಮಾಡಲಾಗುತ್ತದೆ" ಎಂದು ಅವರು ಹೇಳುವುದು ನ್ಯಾಯ; ಯಾವುದೂ ಕೈಲಾಗುವುದಿಲ್ಲ ಎಂದು ಖಚಿತವಾಗಿ ತಿಳಿದಾಗ, ಅವರು, "ಆಗಲಿ! ಕೈಲಾದ ಮಟ್ಟಿಗೆ ನೆರವೇರಿಸೋಣ" ಎನ್ನುತ್ತಾರೆ. ಸಾಧ್ಯವಾದದ್ದೇನು, ಕೈಲಾದಮಟ್ಟು ಎಷ್ಟು, ಎಂದು ಜನಸಾಮಾನ್ಯರು ನಿಧಾನವಾಗಿ ಯೋಚಿಸಿ ಪತ್ತೆ ಹಚ್ಚಿಕೊಳ್ಳಬೇಕೇ ಹೊರತು, ಅದನ್ನೆಲ್ಲ ಬಯಲುಮಾಡುವುದಕ್ಕಾಗುತ್ತದೆಯೆ, ಪ್ರಜಾಸರ್ಕಾರದಲ್ಲಿ?

ಮಸಲ, ಒಂದು ರಚನಾತ್ಮಕ ಯೋಜನೆಯನ್ನು ಜನಸಾಮಾನ್ಯದವರು ನಾಯಕರ ಮುಂದೆ ಮಂಡಿಸಿದರು, ಎನ್ನಿ. ಅದು ಅವರಿಗೆ ರುಚಿಸದೆ ಇದ್ದರೆ, ಅವರು ಅದಕ್ಕೆ, "ಆಲೋಚಿಸಲಾಗುವುದು" ಎನ್ನುತ್ತಾರೆ. ಅಥವಾ, "ನಮ್ಮ ಗಮನದಲ್ಲಿದೆ" ಎಂದು ಉತ್ತರ ಕೊಟ್ಟರೆ, ಮುಂದಿನ ಚುನಾವಣೆ ತನಕ ಅದರ ಪ್ರಸ್ತಾಪ ಎತ್ತಬೇಡಿ, ಎಂಬುದೇ ಅರ್ಥ. "ಅದರ ವಿಷಯವಾಗಿ ಒಂದು ಸಮಿತಿಯನ್ನು ನಿಯಮಿಸಿ, ಎಲ್ಲ ಅಭಿಪ್ರಾಯಗಳಿಗೂ ಮನ್ನಣೆಕೊಟ್ಟು, ಇತ್ಯರ್ಥಕ್ಕೆ ಬರುತ್ತೇವೆ" ಎಂದರೆ, ಅದರ ಸಮಾಧಿ ಆದ ಹಾಗೇನೆ. ಹಾಗೆನ್ನದೆ, "ಅದು ನಮ್ಮ ಗಮನದಲ್ಲಿದೆ" ಎಂದರೆ, ಮೂರು ವರ್ಷಗಳ ಕಾಲಾವ

ಕಾಶ, "ಆದಷ್ಟು ಬೇಗ ಮಾಡುತ್ತೇವೆ' ಎಂದರೆ, ಎರಡೂವರೆ ವರ್ಷ, "ಇಷ್ಟರಲ್ಲೇ ಮಾಡುತ್ತೇವೆ" ಎಂದರೆ, ಇಪ್ಪತ್ತು ತಿಂಗಳು; "ಕೂಡಲೇ" ಎಂದರೆ, ಒಂದೂವರೆ ವರ್ಷ; "ಆಜ್ಞೆ ಹೊರಡಲಿದೆ" ಎಂದರೆ ಒಂದು ವರ್ಷ. "ಆಜ್ಞೆ ಹೊರಟಿದೆ" ಎಂದರೆ, ನವಮಾಸ—ಹೀಗೆ ಗುಣಾಕಾರ ಮಾಡಿಕೊಳ್ಳಬೇಕೇ ವಿನಹ, ರಾಜಕೀಯ ಪಾರಿಭಾಷಿಕ ಶಬ್ದಗಳ ಪರಿಚಯವಿಲ್ಲದ ನಮ್ಮಂಥವರು ನಾಯಕರನ್ನು ವೃಥಾ ಟೀಕಿಸಬಾರದು; ಸಾಮರಸ್ಯವನ್ನು ಕಳೆದುಕೊಳ್ಳಬಾರದು.

—ರೇವಣ್ಣ.

— o —



ಏನೋ ಕಾಲ ಕೆಟ್ಟು ಹೋಯ್ತಮ್ಮಾ, ನಮ್ಮ ಕಾಲದಲ್ಲಿ ಗೆಣಸನ್ನ ತಿಥಿಗಿಥಿ ಮಾಡಿದಾಗ ತರ್ತಾ ಇದ್ದರು.

— ಈಗ ಅದನ್ನೇ ದಿನಾಗಲೂ ತಿನ್ನಿ, ಅಕ್ಕಿಗೆ ಜತೆಗ ತಿನ್ನಿ ಅಂತಾರಂತೆ — ಏನು ಅವಲಕ್ಷಣಾಮ್ಮಾ ದಿನಾಗಲೂ—

# "ಬಾಲ ಬಾಧೆ"

— ೧ —

ಗುಂಡ ಭಂಡ ಸಾಲ ಶೂಲ
ನೊಗ ದಗ ಯಮ ನಾಮ
ಅವನಿಗೆ ಸಾಲ ಇವನಿಗೆ ನಾಮ
ಮರದ ನೊಗ ಗುಂಡನ ದಗ
ಹಣದ ಜೋಕೆ ಯಾರಿಗೆ ನಾಮ

ನಮ್ಮ ನೆರೆಯವರೇ ನಮಗೆ ಹೊರೆಯಾದರೆ ನಾವು ಹಾಯಾಗಿರುಕ್ಕಾಗುತ್ತದೆಯೇ? ಹೇಳಿ! "ಇವತ್ತು ಹತ್ತು ರೂಪಾಯಿ ಸಾಲ ಕೊಡಿ ರಾಯರೇ, ಒಂದನೇ ತಾರೀಖು ತಲಪಿಸಿಬಿಡುತ್ತೇನೆ" ಎಂದು ಕೇಳುವವರು ಒಬ್ಬರು— "ಸೌದೆ ತುರ್ತಾಗಿ ಬೇಕು, ಸ್ವಲ್ಪ ಗೋಧಿ ತೆಗೆದುಕೊಳ್ಳುತ್ತೇನೆ, ನಿಮ್ಮ ರೇಷನ್ ಕಾರ್ಡು ಕೊಡಿ" ಎಂದು ಅಂಗಲಾಚುವವರು ಇನ್ನೊಬ್ಬರು— ನಮ್ಮ ಮನೆಗೆ ಪೇಪರ್ ಬರೋದೇ ಕಾಯುತ್ತ ನಮ್ಮನೇ ಜಗುಲಿ ಮೇಲೆ ಕಾಯುತ್ತ ನಿಲ್ಲುವ ಮೇಷ್ಟರು—ಇದಕ್ಕೆಲ್ಲಾ ಒಂದೇ ಉಪಾಯ. ಮೇಲೆ ಇದೆಯಲ್ಲ ಬಾಲಬೋಧೆಯ ಪಾಠದಂತೆ. ಈ ರೀತಿ ಹತ್ತಾರು ಪಾಠಗಳನ್ನು ಬರೆದು ನಾನೇ ಒಂದು ಸ್ವಂತ ಬಾಲಬೋಧೆ ಬರೆದಿದ್ದೇನೆ. ಯಾವ ಯಾವ ಸಮಯಕ್ಕೆ ಯಾವ ಯಾವ ಪಾಠವನ್ನು ಓದಬೇಕೆಂಬುದನ್ನು ನನ್ನ ಹತ್ತು ವರ್ಷದ ಮರೀಗೆ ಚೆನ್ನಾಗಿ ಅಭ್ಯಾಸ ಮಾಡಿಸಿ ಬಾಯಿಪಾಠ ಮಾಡಿಸಿದ್ದೇನೆ.

ಪಕ್ಕದ ಮನೆ ಗುಂಡೂರಾಯರು ಬಂದರೆ—ಅವರು "ರಾಯರೆ! ಬಹಳ ಸಮಯ" ಅನ್ನೋ ವೇಳೆಗೆ ನಮ್ಮ ಮರಿ ಮೇಲ್ಕಂಡ ಐದನೆಯ ಪಾಠವನ್ನು ಬೊಂಬಡಿ ಹೊಡೆಯುತ್ತಾನೆ. ರಾಯರು ಮಾತು ಮುಂದುವರಿಸದೆ ಪರಾರಿ.

ಅಕ್ಕದ ಮನೆ ನರಸಿಂಗರಾಯರು ರೇಷನ್ ಕಾರ್ಡು ಎರವಲಿಗೆ ಬಂದಾಗ ಬಾಲಬೋಧೆಯ 18ನೇ ಪಾಠವನ್ನು ಈ ರೀತಿ ಹುರುಪಿನಿಂದ ಬಡಿದುಕೊಳ್ಳುತ್ತಾನೆ.

ರೇಷನ್ ಕಾರ್ಡ್ ಪೋಲೀಸ್ ಸಲೀಸ್
ಆಟ ಊಟ ಅವರಿಗೆ ಊಟ ಇವರಿಗೆ ಕಾಟ
ಅವನು ಹುಚ್ಚ ನಿನಗೇನು ಹುಚ್ಚೊ ಬಾಯಿ ಮುಚ್ಚು
ಕೊಟ್ಟವನು ಕೆಟ್ಟ ಚೂಟಿಯ ಮಾತು ಬೂಟಾಟಿಕೆ ಸಾಕು
ಕೊಟ್ಟೆಷ್ಟುಣ್ಣೊ ಮಹರಾಯ ತಾಳ ಹಾಕು ಪದ ಹಾಡು

ಹೀಗೆ ನರಸಿಂಗರಾಯರಿಗೆ ಬಾಧೆ ಕೊಡುತ್ತಾನೆ. ಈ ಬಾಲಬಾಧೆಯನ್ನು ತಡೆಯಲಾರದೆ ನರಸಿಂಗರಾಯರು ಕಂಬಿಕೀಳುತ್ತಾರೆ.

ಹೀಗೆಯೇ ಎಷ್ಟೋ ತರಹ ಪಾಠಗಳು ಅನ್ನಿ ನನ್ನ ಬಾಲಬಾಧೆಯಲ್ಲಿ. ಆದರೆ ಒಪ್ಪುತ್ತೇನೆ ನೀವು ಇಂತಹದನ್ನು ಬರೆಯಬಲ್ಲಿರಿ ಅಂತ. ಆದರೆ ಪ್ರೈಮರಿ ಶಾಲೆಯಲ್ಲಿ ಓದುವಂತಹ ಮುದ್ದು ಮರಿ ಮನೆಯಲ್ಲಿ ಇರಲೇಬೇಕು.

—ಶಾ. ರಾ.

---




ಇದನ್ನೇ ತೆಗೊಳ್ಳೀ—ಒಂದು ಮೂಟೆ ಇಜ್ಜಲು ಹಿಡಿಸುತ್ತೆ.

—ಇಪ್ಪತ್ತೈದು ಸೇರು ಅಕ್ಕಿ ತುಂಬಬಹುದು.

—ಎರಡು ರೂಪಾಯಿನ ಸೌದೆ ಕೂಡ ತುಂಬಬಹುದು.

—ಹಾಗೂ... ...

# ಪ್ರಶ್ನೆಗೆ—ಉತ್ತರ

---

ಬೆಳಗೆ ಸಂಜೆಗೆ ನಿತ್ಯ ಕನ್ನಡಿಯ ತೋರಿಸುತ
ತಲೆಬಾಚಿ ನಸುನಾಚಿ ಕೈಚಾಚಿ ಸರಿಪಡಿಸಿ
ಮನ್ಮಥನ ಮುರುಕಲೋ ಎಂದಿರುವ ರೂಪಿಂಗೆ
ಸನ್ಮಾನ ದೊರೆವಂತೆ, ಸಿಂಗರಿಸುವವರಾರು ?

ಕಾಲ ಕಾಲಕೆ ಎನ್ನ ಹಸುತೃಷೆಯ ನೀಗಿಸಲು
ಸಾಲದನ್ನವ ಕೊಟ್ಟು ಕಾಪಿಡುವವರಾರು ?

ಡೊಂಕು ಕೈ ಉಗುರಿಂದ ನಡುಬೆನ್ನ ತಿನಿಸನ್ನು
ಬಿಂಕದಲಿ ಕೆರೆದದನು ತೊಲಗಿಸುವವರಾರು ?

ಕತ್ತಲಲ್ಲೆಡವಿದಾ ಕಾಲನುಜ್ಜುತ ಎನ್ನ
ಮೆತ್ತಗೇ ಮುತ್ತೊಮ್ಮೆ ಚೇತರಿಸುವವರಾರು ?

ನನ್ನ ನಡೆನುಡಿಗಳನು ಕೊಂಡಾಡುವವರಾರು ?

ಚಿನ್ನ ನೀ ಮಾಡಿದ್ದು, ಚಿನ್ನ ! ಎನುವವರಾರು ?

ನಾನೇ.

— ಶಾಟಾಳ.

—o—

**["ಹೋಟಲುಗಳನ್ನು ಈ ಕೂಡಲೇ ಮುಚ್ಚಬೇಕು" ಎಂಬ ಅನೋಘವಾದ ವಿಷಯವಾಗಿ ಆಕಾಶವಾಣಿಯಲ್ಲಿ ಚರ್ಚಾಕೂಟ ನಡೆಯಿತು. ಅಧ್ಯಕ್ಷತೆ ವಹಿಸಿದ್ದ ವೈದ್ಯನ ಅಧ್ಯಕ್ಷ ಭಾಷಣ.]**

ಈ ಅನೋಘವಾದ ವಿಷಯವಾಗಿ ನಮ್ಮ ಮಿತ್ರರು, ತಂತಮ್ಮ ವಾದ, ಪ್ರತಿವಾದವನ್ನು ನಿಮ್ಮ ಮುಂದೆ ಹೇಳಿದ್ದಾರೆ. ನೀವೆಲ್ಲರೂ ಸಾಮಾನ್ಯವಾಗಿ ಒಪ್ಪುವಂತೆ, ಅವರವರ ಕುಶಾಗ್ರ ಬುದ್ಧಿಯನ್ನು ಉಪಯೋಗಿಸಿ, ತಮ್ಮ ತಮ್ಮ ತರ್ಕವನ್ನು ತಮ್ಮ ತಮ್ಮ ಮೂಗಿನ ನೇರಕ್ಕೆ ಸರಿಯಾಗಿ ಹೇಳಿದ್ದಾರೆ.

ಆದರೆ ಅಧ್ಯಕ್ಷನಾದವನು ರಾಜಕೀಯದಲ್ಲಾಗಲೀ, ಅರಾಜಕೀಯದಲ್ಲಾಗಲೀ, ಪಕ್ಷಾತೀತ. ಪಕ್ಷದ ಬಲದಿಂದ ಮುಂದಕ್ಕೆ ಬಂದವನಾದರೂ, ಪದವಿ ಬಂದ ಕೂಡಲೇ, ನಿಷ್ಪಕ್ಷಪಾತಿಯಾಗುತ್ತಾನೆ—ಅಥವಾ ಆಗಬೇಕು. ಅವನ ಮೂಗಿನ ನೇರವೇ ಡೊಂಕು. ಅವನ ತೀರ್ಪು ಸರಣಿಯೇ ಕುಹಕ. ಇದು ನನ್ನ ವಿಷಯದಲ್ಲಿ—ಖಾಸಗೀ ವೈದ್ಯನ ವಿಷಯದಲ್ಲಿ ಇನ್ನೂ ಹೆಚ್ಚಾಗಿ ಸತ್ಯ.

ಏಕೆಂದರೆ... ... . ..

ಹೋಟಲುಗಳನ್ನು ಮುಚ್ಚಬೇಕು ಎಂದು ಒಪ್ಪಿದರೆ ಒಂದು ರೀತಿಯಾಗಿ ನಾನು ಆತ್ಮಹತ್ಯಮಾಡಿಕೊಂಡಂತೆ. ಹೋಟಲುಗಳು ಇದ್ದರೇ ಅಲ್ಲವೇ ಊರಿನಲ್ಲಿ ಬೇನೆ ಕ್ವಾಮು ಬರುವುದು? ಕಂಡವರ ಹೊಟ್ಟೆನೋವು ಹೊಟ್ಟೆ ಉರಿಯಿಂದ ತನ್ನ ಹೊಟ್ಟೆಹೊರೆದುಕೊಳ್ಳುವವನು ಹೋಟಲುಗಳು ಮುಚ್ಚಿದರೆ, ಹೇಗೆ ತನ್ನ ಜೀವನ ನಡೆಸಿಕೊಳ್ಳಬಹುದು? ಅಂದ ಮೇಲೆ ನನ್ನ ಹೊಟ್ಟೆ ಮೇಲೆ ನಾನೇ ತಣ್ಣಗೆ ಒದ್ದೆ ಬಟ್ಟೆ ಹಾಕಿಕೊಂಡಂತಾಗುವುದಿಲ್ಲವೇ?

ಹಾಗೂ ಹೋಟಲುಗಳನ್ನು ಮುಚ್ಚಿದರು ಎನ್ನಿ. ಆದರೂ ನನಗೆ ಸಂಪಾದನೆ ತಕ್ಕಮಟ್ಟಿಗೆ ನಡೆಯಿತು ಎನ್ನಿ. ಬಂದ ದುಡ್ಡಿನಲ್ಲಿ ಒಂದು ಮಸಾಲೆ ಚಕ್ರದೋಸೆ, ಒಂದು ಸೇರು ಗರಮಾಗರಂ ಓಂಪುಡಿ, ಒಂದು ತಟ್ಟೆ ಬಾದಾಮ್ ವಾಸನೆಯ ಹಲ್ವ. ಬೆವರು ಸುರಿಸಿ ಮಾಡಿದ ಒಂದು ತಟ್ಟೆ ಬೊಂಡಾ. ಇವು ಯಾವುದೂ ಸಿಗದೆ ಇದ್ದರೆ ಜೀವನ ಹೇಗೆ ನಡೆಸೋದು ಅಂತೀನಿ.—ಅಷ್ಟೇ ಅಲ್ಲ!—ಯಾಕೆ ನಡೆಸಬೇಕು ಅಂತೀನಿ? ಈ ಸಮಸ್ಯೆ ಎದ್ದು ನಿಂತರೆ ಗಂಟಲು ಒತ್ತುತ್ತೆ. ಕಣ್ಣೀರಿಡುತ್ತೆ. ಕಾಷಾಯದ ಮೇಲೆ ಕಣ್ಣು ಹೋಗುತ್ತೆ. ಕಡೆಗೆ ಕಾಷಾಯ ಕೂಡ ದಂಡ ಅನ್ನುತ್ತೆ ಅಲ್ಲವೇ? ಇಷ್ಟೇ ಅಲ್ಲ—ಇನ್ನೂ ಒಂದು ರೀತಿಯಾದ ಅಪಾಯ ಇದೆ.

ನಮ್ಮೂರಿಗೆ ನೆಂಟರು ಇಷ್ಟರು ಯಾರಾದರೂಬಂದರೆ ಈಗ ಹೋಟಲಿನಲ್ಲಿ ಇಳಿದುಕೊಳ್ಳುತ್ತಾರೆ. ಒಂದು ಸಾಯಂಕಾಲ ಮನೆಗೆ ಬಂದು ವಿಚಾರಿಸಿಕೊಂಡು ಒಂದು ವಾರದ ರೇರ್ಷ ಖತಂಮಾಡಿಸಿ ಹೋಗುತ್ತಾರೆ. ಒಂದು ಸಾಯಂಕಾಲ ಅವರ ಬಡಾಯಿ ಅವರ ಜಂಭ ಅವರ ಅತಿಥಿತನ ತಡೆಯುವುದೇ ಕಷ್ಟವಾಗುತ್ತೆ, ಅಂಥಾದ್ದರಲ್ಲಿ ಹೋಟಲುಗಳೇ ಇಲ್ಲದೆ ಇದ್ದರೆ. ನಮ್ಮ ಮನೆಯೇ ಹೋಟಲಾಗಿಬಿಡುತ್ತೆ. ಅರೆಹೊಟ್ಟೆ ಆದರೂ ಕಾಲು ಚಾಚಿ ಮಲಗೋದೂ ತಪ್ಪಿಹೋಗುತ್ತೆ. ಹೋಟಲು ತಿಂಡಿ ರುಚಿ ಇಲ್ಲದೆ ಹೋಟಲಿನ ಗಜಿಬಜಿ ಎಲ್ಲಾ ಮನೇಲಿ ಅನುಭವಿಸುವಂತಾಗುತ್ತೆ ಅಲ್ಲವೇ ?

ಇದೆಲ್ಲಾ ತಿಳಿದು—ಹೋಟಲುಗಳನ್ನು ಮುಚ್ಚಕೂಡದು ಅಂತಂದೆ ಅನ್ನಿ, ಅದರಲ್ಲೂ ಅಪಾಯ ಇದೆ.

ಇಸ್ಪೀಟಾಟದಲ್ಲಿ, ನರಿ ನೋಡಿದ ಒಂದು ದಿನ ಬೆಳಿಗ್ಗೆ ಒಂದು ಹತ್ತು ರೂಪಾಯಿ ಬಂತು ಅನ್ನಿ. ಜತೆಗಾರರೆಲ್ಲಾ ಈಗ ಕೂಡಿಕೊಂಡು ಆ ಹತ್ತು ರೂಪಾಯಿ ಹೋಟಲಿನಲ್ಲಿ ಮುಗಿದು ಇನ್ನೊಂದು ರೂಪಾಯಿ ಸಾಲ ಆಗುವ ತನಕ ಬಿಡುಲ್ಲ. ಹೋಟಲುಗಳು ಇಲ್ಲದೆ ಇದ್ದಾಗ ನಮ್ಮನೆಗೆ ಅವರನ್ನು ಟೀಪಾರ್ಟಿಗೆ ಕರೆಯಬಹುದು. ನಮ್ಮನೆಯಲ್ಲಿ ತಿಂಡಿ ತಿನಸು ತಿಂದ ನಮ್ಮ ಜತೆಗಾರರು ಹಣ ಕೂಡ ಕೊಡ್ತೀನಿ ಅಂದರೂ ನಮ್ಮ ಮನೆಗೆ ಬರುಲ್ಲ. "ನೀನು ಮದುವೆಯಾದೋನೋ, ನೀನು ಅನುಭವಿಸು ನಿನ್ನ ಹೆಂಡತಿ ಅಡಿಗೇನ" ಅಂದು ಘಂಟಾಘೋಷವಾಗಿ ಹೇಳಿಬಿಡ್ತಾರೆ. ಹಾಗೂ ಉಳಿತಾಯ ಹೀಗೂ ಉಳಿತಾಯ. ಈ ಅನುಕೂಲ ಕಳೆದುಕೊಳ್ಳೋದೇ ?

ಅಲ್ಲದೆ—ಈಗ ಹಾಲಿನವನಿಗೆ ತಿಂಗಳಾಗುತ್ತಲೂ ಹಣ ತೆರಬೇಕು. ಸಾಲ ಹೇಳಿದರೆ ಅವ ಕೇಳಲೊಲ್ಲ. ಜೋರೇ ಮಾಡ್ತಾನೆ. "ಬಿಡ್ರಿ ಬಿಡ್ರಿ ನಿಮಗೆ ಹಾಲೇ ಕೊಡೋಲ್ಲ ಹೋಟಲಿಗೆ ಹಾಕ್ತೀನೆ, ಅವರು ಮುಂಗಡ ಹಣ ಕೂಡ ಕೊಡ್ತಾರೆ" ಅಂತಾನೆ. ಹಾಲಿನವರ ಭಾಷೆ ನಿಮಗೆಲ್ಲಾ ಗೊತ್ತಿಲ್ಲ. ಕಡ್ಡಿಪುಡಿ ಮುರಿದ ಹಾಗೆ ಮಾತನಾಡುತ್ತಾರೆ. ಹೋಟಲುಗಳು ಮುಚ್ಚಿದರೆ, ಅವನ ಜರ್ಬು ಅರ್ಧ ಅಡಗುತ್ತೆ. ಬಟ್ಟುಹಾಕಿ ಹಾಲು ಸಾಲ ಕೊಡ್ತಾನೆ. ಒಂದೆರಡು ದಿವಸ ತಡೆದರೂ ಸುಮ್ಮನಿರ್ತಾನೆ. ಹಾಗೇ ಸೌದೆ ಅಂಗಡಿಯವರೂ, ಅಕ್ಕಿ ಬೇಳೆ ವ್ಯಾಪಾರಿಗಳೂ, ಎಲ್ಲರೂ ಈಗಿನಂತೆ ತಲೆಯೆಲ್ಲಾ ಮಾತನಾಡುಲ್ಲ. ಮೊದಲಿನಂತೆ ನಮ್ರತೆ, ವಿನಯ, ಬಾಕಿ ಬರೆದುಕೊಳ್ಳೋದು ಇವೆಲ್ಲಾ ಮರಳಿ ಬರುತ್ತವೆ.

ಇವೆಲ್ಲಾ ಅಲ್ಲದೆ. ಇನ್ನೂ ಒಂದು ವಿಚಾರ ಯೋಚನೆ ಮಾಡಬೇಕಾಗ್ಗಿದೆ. ಅದು ನನ್ನ ಹೆಂಡತಿ ಯಮುದಂತಿಯು ವಾದ ಸರಣಿ. ಆಕೆ ಹೆಸರಿಗೆ ತಕ್ಕಂತೆ ಮಾತನಾಡಿದರೆ ಕಡಿದಹಾಗೆ ಆಗುತ್ತೆ. " ನೋಡಿ ! ಅಂದ್ರೆ. ಈ ಹೋಟಲು ಗಳನ್ನು ಮುಚ್ಚಿದರೆ, ಆಗ ನಿಮಗೆ ಗೊತ್ತಾಗುತ್ತೆ. ಆ ದಮಯಂತಿ ಗಂಡ ಮಾಡಿ ಇಳಿಸುತ್ತಿದ್ದನಲ್ಲಾ ಅದೇ ತರಹಾ ನಳಪಾಕ ನಾನಿಳಿಸುತ್ತೀನಿ ಅಂತ.— ಹಿಂದಿನ ದಿವಸದ ಪಲ್ಯ ಎರಡು ದಿನ ಬೆಳೆದರೆ ಸೌದೆ ಆಗುತ್ತಿದ್ದ ತರಕಾರಿ. ಅಡಿಗೆಯವನ ಮೈ ಬೆವರು, ಜತೆಗೆ ವಗ್ಗರಣೆಗೆ ಅಂತ ಒಂದು ಜಿರಳೆ, ಒಂದು ಹಲ್ಲಿ, ಕಡೆಗೆ ಒಂದು ಚೇಳು, ಇವೆಲ್ಲವನ್ನೂ ಅರೆದು ದೋಸೆ ಹಾಕಿ ಬಿಸಿ ಬಿಸಿ ಯಾಗಿ ನಿಮಗೆ ಕೊಟ್ಟರೆ ವಹವ್ವಾ ! ಎಂಥಾ ಮಸಾಲ್‌ದೋಸೆ ಅಂತ ಒಂದನ್ನು ಬಾಯಿ ಬಾಯಿ ಬಿಟ್ಟು ತಿನ್ನುತ್ತೀರಿ. ಆ ಮೇಲೆ ಮೂರು ದಿನ ಅರಾರೂಟ್ ಗಂಜಿ, Sulphaguanidine, ನೀರು ಮಜ್ಜಿಗೆ ಕುಡೀತೀರಿ. ಮನೇಲಿ ಮೆಂತ್ಯದ ದೋಸೆ ಹಾಕಿದರೆ, ಮೂವತ್ತು ತಿನ್ನುತ್ತೀರಿ. ಒಂದು ಸರ್ತಿ ಕೂಡ ಚೆನ್ನು ಅನ್ನುಲ್ಲ. ಮೂರು ದಿವಸ ಪಥ್ಯಾನೂ ಮಾಡುಲ್ಲ" ಅಂತ ರೇಗ್ತಾ ಇರ್ತಾಳೆ.

ಈ ವಾದದಲ್ಲಿ ತಿರುಳಿಲ್ಲದೇ ಇಲ್ಲ. ಈಗೀಗ ಇದರ ಸತ್ಯ ಸ್ವಲ್ಪ ಕಾಣ ಬರುತ್ತಿದೆ. ಏಕೆ ಅನ್ನಿ ! ಈಗ ಅನ್ನಕ್ಕೇ ಅಕ್ಕಿ ಸಿಗುಲ್ಲ. ಇನ್ನು ಮೆಂತ್ಯದ ದೋಸೆ ಎಲ್ಲಿ ಬಂತು ? ಅದಕ್ಕೇ ಅಂತ ಕಾಣುತ್ತೆ ಅದರ ರುಚಿ ಈಗ ನಾಲಿಗೆ ತುದಿಯಿಂದ ನೆನಪಿನ ಮೂಲಕ ಬ್ರಹ್ಮರಂಧ್ರಕ್ಕೇ ಏರುತ್ತೇ ?

ಹೌಗು ! ಹೌದು ! ಈ ವಾದ ಸರಣೀಲಿ ಎಲ್ಲೋ ಆ "ಸತ್ಯ" ಸ್ವಲ್ಪ ಮಟ್ಟಿಗಾದರೂ ಹುದುಗಿದೆ ಅಂತ ಕಾಣುತ್ತೆ.

ಈ ದ್ವಂದ್ವವೆಲ್ಲಾ ಮನಸ್ಸಿಗೆ ಹೊಳೆದ ಮೇಲೆ ತೀರ್ಪಾದರೂ ಏನು ಕೊಡೋದು ?

ನನಗನ್ನಿಸುತ್ತೆ. ಇದರ ಉತ್ತರ ರಾಜಕೀಯದಲ್ಲಿ ಸಿಗುತ್ತೆ ಅಂತ.—ಜನ ಜೀವನದಲ್ಲಿ ಸಿಗುತ್ತೆ ಅಂತ. ಯಾವುದಾದರೂ ಒಂದು ದ್ವಂದ್ವ ಬಂದರೆ ಇವೆರಡರಲ್ಲೂ, ಒಂದು Compromise ಮಾಡುತ್ತಾರೆ. ಒಂದು ಮಧ್ಯ ಮಾರ್ಗ ಹಿಡಿಯುತ್ತಾರೆ. ಕಾಳಸಂತೆ ಬಿಳೀಸಂತೆ ಅಂತಂದರೆ ಎರಡರಲ್ಲೂ ಕೊಳ್ಳೋಣ ಅಂತಾರೆ ಜನ ಅಲ್ಲವೇ ? ಕೆಂಪುರಾಜಕೀಯವೇ ? ಕಪ್ಪುರಾಜ ಕೀಯವೇ ಅಂದರೆ ಕೇಸರಿಯೇ ರಾಜಕೀಯ ವರ್ಣ ಅಂತಾರೆ ಜನ.

ಹಾಗೇ ಈ ದ್ವಂದ್ವದಲ್ಲೂ ಮಧ್ಯಮಾರ್ಗ ಉಚಿತ ಅಂತ ತೋರುತ್ತೆ ನನಗೆ

ತಿಂಗಳ ಮೊದಲನೇ ತಾರೀಖಿನಿಂದ ಮೂರನೇ ತಾರೀಖಿನವರೆಗೆ ಹೋಟಲುಗಳು ಇರಬೇಕು. ನಂತರ ತಿಂಗಳೆಲ್ಲಾ ಮುಚ್ಚಬೇಕು, ಹೀಗಾದರೆ ನಮ್ಮ ಜೇಬಿನಲ್ಲಿ ಒಂದೆರಡು ಪುಡಿಗಾಸು ಓಡಾಡುವಾಗ ಹೋಟಲಿರುತ್ತೆ. ನಾಲಿಗೆ ತಿನಸು ತೀರಿಸಿಕೊಳ್ಳಬಹುದು. ನಂತರ ಜೇಬು ಬರಿದಾದಾಗ ಮನೆಯಲ್ಲಿ "ಅದೇ ಅಮೃತಾ ಉಂಡೇನು ಕದಾ ತೆಗೀ" ಅಂತ ಕೂಗಬಹುದು.

ಅಂದ ಹಾಗೇ ನಾನ್ಯಾಕೆ ತೀರ್ಪುಕೊಡಬೇಕು ಕೇಳಿದವರು ನೀವಲ್ಲವೇ ತೀರ್ಪು ಕೊಡೋರು?

— "ಆಕಾಶವಾಣಿ"ಯ ಕೃಪೆಯಿಂದ.





ಆ "ಡಿ ಡಿ ಟಿ" ತಿಂದೂ ತಿಂದೂ
ಹ್ಯಾಗೆ ಬೆಳೆದಿದಾಳೆ ನೋಡೆ.

# ಮೀಸೆಗೆ ಮೀಸಲು

—o—

ದಫೇದಾರ್ ದೊಡ್ಡಯ್ಯ, ಮೀಸೆ ತಿರುವುತ್ತ, ತೊಟ್ಟಿದ್ದ ಕಾಕಿ ಬಟ್ಟೆ ಮೇಲಿಂದ ಧೂಳು ಹೊಡೆದ... ಅವನು, 'ಸಂತೋಷದಲಿ ತೇಲಿದ', ಅಂದರೆ, ಏನೇನೂ ಸಾಲದು. ಸಂತೋಷ ಸಾಗರದಲ್ಲಿ ಮುಳುಗಿ ನೀರು ಕುಡಿದು ಮೂರು ಬಾರಿ ಮೇಲೆದ್ದು, ಸಂತೋಷವನ್ನುಟ್ಟು ಸಂತೋಷವನ್ನುಂಡು.... ಇತ್ಯಾದಿ ಸಂತೋಷ ಕೋಶವನ್ನೇ ಒರೆದು ಮಾಡಬೇಕಾಗುತ್ತದೆ. ಅವನು ನವಿಲಾಗಿದ್ದರೆ, ಗರಿಬಿಚ್ಚಿ ಕುಣಿಯುತ್ತಿದ್ದ; ಕುರಿಮರಿಯಾಗಿದ್ದರೆ, ಛಂಗನೆ ನೆಗೆದಾಡುತ್ತಿದ್ದ; ಬೆಕ್ಕಿನ ಮರಿಯಾಗಿದ್ದರೆ, ಬೆಚ್ಚಗೆ ಒಲೆ ಮುಂದೆ ಗುರ್ ಎನ್ನುತ್ತ ಕೂರುತ್ತಿದ್ದ; ಕುದುರೆ ಆಗಿದ್ದರೆ, ಕೆನೆಯ ಛಟ್ಟೆಯಾಗುತ್ತಿದ್ದ .. ಇತ್ಯಾದಿ ಹೇಳಬೇಕಾಗುತ್ತದೆ.

ಅಂದೇ, ಆಗಲೇ, ಅವನಿಗೆ ದಫೇದಾರಿ ಕೆಲಸ ಸಿಕ್ಕಿತ್ತು. ಆರ್ಡರನ್ನು ಕೈಯ್ಯಲ್ಲೇ ಹಿಡಿದು ನಿಂತಿದ್ದ. ಕಾಕಿ ಡಿರೆಸ್ಸನ್ನು ಸರಿಪಡಿಸುತ್ತ, ಅದರ ಎಳೆ ಎಳೆಗೂ ಹಾಸುಹೊಕ್ಕಾಗಿ ಸೇರಿಕೊಂಡಿದ್ದ ದರ್ಪ, ಠೀವಿ, ಠೇಂಕಾರ ಜಬರ್‌ದಸ್ತು ಜಂಭಗಳನ್ನು ನೆನೆದು ಮೆಲುಕುಹಾಕಿದ. ಇನ್ನು ಮೇಲೆ, ಅವನೂ ಒಂದು ನಂಬರ್! ಅವನ ಎಡಗೈ ಅಡ್ಡಕ್ಕೆ. ಹತ್ತುಸಾವಿರ ರೂಪಾಯಿ ಕಾರುಗಳು ಧಟಕ್ಕನೆ ಬ್ರೇಕ್ ಹಾಕುವವು! ಅಮಲು ಹತ್ತಿ ದಾರಿ ಉದ್ದಕ್ಕೂ ಸೊಟ್ಟಸೊಟ್ಟಗೆ ವಾಲುತ್ತ ಬರುವ ಹೆಂಡದ ಲಾರಿಗಳೂ ಕೂಡ, ಅವನ ಅಡ್ಡ ಕೈಯ್ಯನ್ನು ನೋಡಿ ಹೆದರಿ, ಗುಟುರು ನುಂಗಿ, ನಿಂತೇ ಬಿಡುತ್ತವೆ. ಸುತ್ತ ನಾಲ್ಕು ಮೈಲಿ ಆಜೂಬಾಜೂ ಕೇಡಿಗಳೆಲ್ಲ ಎದೆ ನೀವಿಕೊಂಡು ಕತ್ತಲಲ್ಲೇ ನುಸುಳುತ್ತಾರೆ ಎಂಥ ಗ್ರಾಸ್ತರೂ ಕೂಡ, ಅವನನ್ನು ಕಂಡ ಕೂಡಲೇ, ಮೀಸೆಯನ್ನು ಇಳೀಬಿಡುತ್ತಾರೆ. ಮಕ್ಕಳಂತೂ, ಕಿಟೋ ಅಂತ ಕಿರಿಚಿಕೊಂಡು ಒಳಕ್ಕೆ ಹಾರುತ್ತವೆ; ಅವರ ತಾಯಂದಿರು ಅವರನ್ನು ನೆಟ್ಟಗೆ ಹನುಮಂತ ರಾಯನ ಗುಡಿಗೆ ಎಳೆದೊಯ್ಯುತ್ತಾರೆ.

ಇನ್ನು ಮೇಲೆ, ದೊಡ್ಡಯ್ಯ ಹಿಂದಿನಂತೆ, ಬಂಧು ಬಳಗ ನಂಟ ಇಷ್ಟ ಅಂತ ಸರಸ ಸಲ್ಲಾಪ ಮಾಡುವ ಹಾಗಿಲ್ಲ. ಫುಟ್‌ಬಾಲ್ ಆಟದಲ್ಲಿ ದೊಡ್ಡಯ್ಯ ನಿಗೆ 'ಟಾಂಗ್ ಕೊಟ್ಟು ಬೀಳಿಸಿದ ರಹೀಮು, ಸೈಕಲ್ ಚಕ್ರಕ್ಕೆ ಸೂಜಿ ಚುಚ್ಚಿ ಗಾಳಿ ತೆಗೆದ ಗೋವಿಂದಪ್ಪ, ಚಪ್ಪರದಲ್ಲಿ ತನಗೆ ತಾಂಬೂಲ ಮೊದಲು ಕೊಡದೆ

ಅಪಮಾನ ಪಡಿಸಿದ ಆಚೆ ಪಾರ್ಟಿ ಚಿಕ್ಕ ಪುಟ್ಟೇಗೌಡ,—ಎಲ್ಲರೂ ಇನ್ನು ಜೋಯಿಸರ ಹತ್ತಿರಕ್ಕೆ ಹೋಗಿ ಭವಿಷ್ಯ ಹೇಗಿದೆ, ಸ್ವಾಮಿ, ಅಂತ ವಿಚಾರಿಸ ಬೇಕಾದ್ದೆ. "ನನಗೆ ದಫೇದಾರಿ ಸಿಕ್ಕಿದ ಸಮಾಚಾರ ಕೇಳಿ, ಊರಾಗೆ ಈಗ ಕಿಷ್ಣಪ್ಪನ ಹೋಟಲ್‌ನಲ್ಲಿ ಬಹು ಚರ್ಚೆಯಾಗ್ತಾ ಇರಬಹುದು" ಎಂದು ದೊಡ್ಡಯ್ಯ ಯೋಚಿಸಿ, ತನಗೆ ತಾನೇ ನಕ್ಕ. ಮೀಸೇನ ಮತ್ತೆ ರೊಯ್ ಅಂತ ತಿರುವಿದ. "ಲಕ್ಕಪ್ಪ ಶೆಟ್ಟರಂತೂ, 'ಸುಳ್ಳು! ದೊಡ್ಡಯ್ಯನನ್ನು ಪೋಲೀಸಿಗೆ ಯಾವೋನು ಸೇರಿಸುತ್ತಾನೆ, ಬಿಡ್ರಯ್ಯ!' ಅಂತಾರೆ ಆಗ, ಅಂಥಾವನಿಗೇನೆ ಈಗ, ಸುಗ್ಗಿ! ಅಂತ ಕುಳ್ಳೇಗೌಡ ಹೇಳೇಹೇಳ್ತಾನೆ" ಎಂದೆಲ್ಲ ದೊಡ್ಡಯ್ಯ ಚಿಂತಿಸಿದ.

ಯಾರೇನು ಬೇಕಾದರೂ ಟೀಕೆ ಮಾಡಲಿ, ದೊಡ್ಡಯ್ಯನಂತೂ ದಫೇದಾರ ಆಗೇ ಬಿಟ್ಟ. "ಇನ್ನೆರಡು ವರ್ಷ, ಎಂಟು ಜನಕ್ಕೆ ಡ್ರಿಲ್ ಮಾಡಿಸೋ ಪವರ್ ದೊರೆಯುತ್ತೆ; ದೇವರ ದಯದಿಂದ, ಕೇಡಿಗಳಿಬ್ಬರಿಗೆ ಕೇಡುಗಾಲ ಬಂದರೆ, ಸಾರ್ಜಂಟಾಗಿ ಬಡ್ತಿಯಾಗುತ್ತೆ ಖೂನಿ, ದರೋಡೆ ಸಾಕ್ಷ್ಯದಾದರೆ, ನನ್ನ ಹೆಸರು ಪೇಪರಿನಲ್ಲಿ ಬರುತ್ತೆ; ಚಿಕ್ಕಸಾಹೇಬರು ದೊಡ್ಡಸಾಹೇಬರು ಓದುತ್ತಾರೆ. ಓದಿದ ತಕ್ಷಣ ಬಂತು, ಪ್ರಮೋರ್ಷ, ಅಂತಲೇ. ಸಾಹೇಬರ ದೃಷ್ಟಿ ತಗುಲಿದರೆ, ಲಕ್ಷ್ಮೀನೂ-ಒಲಿಯುತ್ತಾಳೆ. ಸಬ್ ಇನ್ಸ್ಪೆಕ್ಟರ್ ಗಿರೀನೂ ಹತ್ತಿಬಿಡಬಹುದು. ಆ ಮೇಲೆ, ತಕೊ! ಮಜಾ! ಕಿಷ್ಣಪ್ಪನ್ ಹೋಟಲ್‌ನಲ್ಲಿ ಕೂತವರ ಕಣ್ಣೆಲ್ಲ ಕೆಂಪು! ಊರಾಗಿನ ಮಿಡ್ಲಿಸ್ಕೂಲ್ ಹುಡುಗರಿಗೆ ಆ ಎಡ್ಮೇಷ್ಟರು, ದಿನವೂ ಚಚ್ಚಿ ಚಚ್ಚಿ, ಬುದ್ಧಿವಾದ ಹೇಳೋವಾಗ, "ಸಬ್ ಇನ್ಸ್ಪೆಕ್ಟರ್ ದೊಡ್ಡಯ್ಯನವರು ನಮ್ಮೂರಿಗೆ ಎಂಥ ಹೆಸರು ತಂದಿದಾರೆ, ಗೊತ್ತೇನ್ರೋ ಅಂತ ಉದಾಹರಣೆ ಮಾಡುತ್ತಾರೆ! ಹಾಗೆ ಹೊಗಳ್ತಾ ಹೊಗಳ್ತಾ, ಮಾರಾಯರು ನನ್ನ ಹತ್ರ ಬಂದು ಮಗನ ಮುಂಜೀಗೆ ಚಂದಾ ಕೇಳಿದರೂ ಕೇಳಿಯಾರು!" ಎಂದು ಮುಂತಾಗಿ ಅಂದುಕೊಂಡ, ದೊಡ್ಡಯ್ಯ.

ಆಗ, "ಟೆನ್‌ಷನ್" ಅಂತ ಯಾರೋ ಕೂಗಿದ ಹಾಗಾಯಿತು. ದೊಡ್ಡಯ್ಯ ಎಚ್ಚೆತ್ತುಕೊಂಡ. "ಲೋ! ಧಡಿಯಾ! ನಿನಗೆ ಎರಡು ರೂಪಾಯಿ ಜುಲ್ಮಾನೆ ಹಾಕಿದೇನೆ. ಡೂಟಿ ಮೇಲೆ ನಿಂತಿರೋವಾಗ, ತೂಕಡಿಸುತ್ತಾ ಇದಿಯಾ?" ಅಂತ ಸಾರ್ಜಂಟ್ ಸಾಹೇಬರು ರೇಗಿದರು..... ದೊಡ್ಡಯ್ಯನ ಮೀಸೆ ಗೊಳೋ ಅಂತ ಜೋಲಾಡಿತು.

ಒಂದೇ ದಿನದ ಚಾಕರಿಗೆ ಎರಡು ದಿನದ ಸಂಬಳ, ದಂಡ!

—ಶೇಷಪ್ಪ.

———o———

# ಡಾ|| ಡಾಮೋದರಂರ ಮೇಧಾಶಕ್ತಿ

---

ಡಾ|| ಡಾಮೋದರಂಗೆ ಸಹಜವಾಗಿ ಮೇಧಾಶಕ್ತಿ ಬಹಳ. ಮುಖ್ಯಪ್ರಾಣನ ಅಡುಗೆಯಿಂದ ಅದು ದಿನೇ ದಿನೇ ಅಧಿಕರಿಸಿತು. ಅವನು ಅದನ್ನು ನುಗ್ಗೆ ಕಾಯಿ ಹುಳಿಯಿಂದ ಮುನ್ನುಗ್ಗಿಸಿದ; ಪಡವಲದಿಂದ ಪಡುವಲದವರನ್ನೂ ಅವರು ಹಿಂದಿಕ್ಕಿಸುವಂತೆ ಮಾಡಿದ; ಬೆಂಡೆಯಿಂದ ಬೆಂಡಾಗದೆಯೂ, ಹಾಗಲ ದಿಂದ ಹಾಗಾಗದೆಯೂ, ಕಾಪಾಡಿದ. ಬಾಳೆಕಾಯಿಂದ ಡಾ||ರ ಬಾಳನ್ನು ಬೆಳೆಯಿಸಿದ, ಹಲಸಿಂದ ಹುಲುಸಾಗಿಸಿದ; ಮೆಣಸ ನುಣಿಸಿ ತಣಿಸಿದ.

ಕ್ಷಣಕ್ಷಣಕ್ಕೂ, ಡಾ||ರ ಚಿತ್ತ ಭಿತ್ತಿಯಲ್ಲಿ ಹೊಸ ಹೊಸ ಚಮತ್ಕಾರ ಯಂತ್ರ ವಿಧಾನ ತಂತ್ರಗಳು ಮೂಡಿದುವು. ಅವರ ತಲೆಬುರುಡೆಯೊಳಗಿದ್ದದ್ದು ಮೆದುಳಲ್ಲ; ಪಾದರಸವೂ ಅಲ್ಲ; ಕಾದರಸ! ಆದ್ದರಿಂದ, ಅವರ ನಿತ್ಯಜೀವನ ದಲ್ಲಿ ಸದಾ ಅದಲು ಬದಲುಗಳು ಜರುಗುತ್ತಲೇ ಇದ್ದುವು. ಎಡಗಾಲಿನ ಬೂಡ್ಸನ್ನೇ ಅವರು ಸದಾ ಬಲಗಾಲಿಗೆ ತಗುಲಿಸುತ್ತಿದ್ದದ್ದು! ಕನ್ನಡಕವನ್ನು ಕೈಗೆ ಸುತ್ತಿಕೊಂಡು, ಗಡಿಯಾರವನ್ನು ಮೂಗಿಗೆ ತಗುಲಿಸುವರು. ಹಲ್ಲುಪುಡಿ ಯನ್ನು ಮೂಗಿಗೇರಿಸಿ, ನಶ್ಯದಿಂದ ಹಲ್ಲು ತಿಕ್ಕುತ್ತಿದ್ದರು. ಲಾಲ್‌ರವರನ್ನು ಟೀಗೆ ಆಹ್ವಾನಿಸುವ ಅವರ ಕಾಗದಗಳನ್ನು ಬ್ಯಾಂಕಿಗೆ ಕಳುಹಿಸುವ ಕವರು ಗಳಲ್ಲಿಡುವರು. ಬ್ಯಾಂಕ್ ಕಾಗದಗಳೆಲ್ಲ ಮುಖ್ಯಪ್ರಾಣನ ಒಲೆಗೂ, ಮುಖ್ಯ ಪ್ರಾಣನಿಗೆ ಕೊಡಬೇಕಾದ ಸಾಮಾನು ಪಟ್ಟಿಗಳೆಲ್ಲ ಅಮೇರಿಕಾ ಪ್ರೊಫೆಸರು ಗಳಿಗೂ ತಲಪುವುವು.

ಡಾ|| ಡಾಮೋದರಂ ನಮ್ಮ ಬಡ ಜನಜೀವನವನ್ನು ಉತ್ತಮಗೊಳಿಸಲು ಅನೇಕ ಶಾಸ್ತ್ರೀಯ ವಿಧಾನಗಳನ್ನು ತಮ್ಮ ವಿಜ್ಞಾನ ಜ್ಞಾನದಿಂದ ಕಂಡು ಹಿಡಿದರು. ಬಿಸಿನೀರು ಸ್ನಾನ ನಮಗೆಲ್ಲ ಆಪ್ಯಾಯಮಾನ; ಆದರೆ, ಕಟ್ಟಿಗೆ ಅಭಾವ! ಈ ಸಂಕಟ ನಿವಾರಣೆಗೆ ಡಾ||ರು ಮೊನ್ನೆ ಒಂದು ಉಪಾಯ ಕಂಡು ಹಿಡಿದರು. ಯಾರಾದರೂ ನಮ್ಮನ್ನು ಅಕಾರಣವಾಗಿ ಬೈದರೆ, ನಮ್ಮ ರಕ್ತ ಕುದಿಯುವುದಿಲ್ಲವೆ? ಹಾಗೆ ಕುದಿಯಲು ಅಡ್ರಿನಲಿನ್ ಎಂಬ ಒಂದು ದ್ರಾವಕ ರಕ್ತನಾಳದಲ್ಲಿ ಉತ್ಪತ್ತಿಯಾಗುವುದೇ ಕಾರಣ. ಆದ್ದರಿಂದ, ಅಡ್ರಿನಲಿನ್ ಗುಳಿಗೆಗಳನ್ನು ಸಾಕಷ್ಟು ನುಂಗಿದರೆ, ನಮ್ಮ ರಕ್ತ ಸಾಕಷ್ಟು ಕುದಿದು, ಮೈ

ಮೇಲೆ ಹುಯ್ದುಕೊಳ್ಳುವ ತಣ್ಣೀರು ಬಿಸಿಯಾಗಿ, ಸೌದೆ ಖರ್ಚು ಉಳಿಯುವು ದೆಂದು ಡಾ|| ಊಹಿಸಿ, ಅದರಂತೆ, ಗುಳಿಗೆಗಳಿಗಾಗಿ ರಸ ಶೇಖರಿಸಲು, ಒಂದು ದಿನ ಮುಖ್ಯಪ್ರಾಣನನ್ನು ಅಕಾರಣವಾಗಿ ಯದ್ವಾ ತದ್ವಾ ಬೈದರು. ಅವನು ಮಲೆನಾಡಿಗೆ ಓಡಿ ಘಟ್ಟ ಇಳಿದು ಸಮುದ್ರ ತೀರದ ತನ್ನ ಊರಿಗೆ ಹೋದ. ಡಾ||ರ ಉಪಾಯ ಅವರ ಅನ್ನಕ್ಕೇ ಅಪಾಯವಾಗಿ ಪರಿಣಮಿಸಿತು.

ಡಾ||ರ ಬಂಗಲಿಯಲ್ಲಿ ಲಕ್ಷಗಟ್ಟಲೆ ಸೊಳ್ಳೆಗಳು ಝೇಂಕರಿಸುತ್ತಿದ್ದುವು. ಅವುಗಳನ್ನು ನಾಶಮಾಡಲು ಅವರು ಒಂದು ಸುಲಭ ಮಾರ್ಗ ಕಂಡುಹಿಡಿದರು. ಕಬ್ಬಿಣದ ಪುಡಿ ಮಿಶ್ರವಾದ ಒಂದು ತೆರದ ಬಣ್ಣವನ್ನು ಗೋಡೆಗೆ ಬಳಿಯು ವುದು; ಆಗ ಅದರ ಮೇಲೆ ಕೂರುವ ಸೊಳ್ಳೆಗಳ ಕಾಲಿಗೆ ಆ ಧೂಳು ಸೇರಿ ಕೊಳ್ಳುತ್ತದೆ. ರೂಮಿನ ನಡುವಣ ಭಾಗದಲ್ಲಿ, ತಾರ್ಸಿಯಿಂದ ಒಂದು ದೊಡ್ಡ ಅಯಸ್ಕಾಂತವನ್ನು ತೂಗು ಹಾಕುವುದು ಆಗ, ಸೊಳ್ಳೆ ಕಾಲುಗಳನ್ನು ಅದು ತನ್ನಲ್ಲಿಗೆ ಬಲವಂತದಿಂದ ಎಳೆದುಕೊಳ್ಳುತ್ತದೆ; ಕಾಂತದಿಂದ ತಪ್ಪಿಸಿಕೊಳ್ಳ ಲಾಗದೆ, ಸೊಳ್ಳೆ ಸಮೂಹ ಅಲ್ಲೇ ಅಂಟಿಕೊಂಡಿದ್ದು, ಉಪವಾಸದಿಂದ ಸಾಯುವುವು. ಇದೇ ಅವರ ನವನವೀನ ನಾಶನ ಮಾರ್ಗ! ಆದರೆ, ಅಹಿಂಸಾ ಯುಗದಲ್ಲಿ ಗಾಂಧೀ ನಾಡಲ್ಲಿ ಇದು ತರವೆ? ಅಲ್ಲದೆ, ಕಬ್ಬಿಣ ಬಣ್ಣವನ್ನು ಪ್ರಾಯೋಗಿಕವಾಗಿ ಬಳಿದಿದ್ದ ಕೊಠಡಿಯಲ್ಲಿ ಅನೇಕ ಅನಾಹುತಗಳೂ ಸಂಭವಿ ಸಿದುವು. ತಿಳಿಯದೆ ಗೋಡೆಗೆ ಒರಗಿಕೊಂಡ ಲಾಲ್‌ನನ್ನು ಕಾಂತ ಎಳೆದೇ ಬಿಟ್ಟಿತು. ಗೋಡೆಗೆ ಹೊಡೆದಿದ್ದ ಮೊಳೆಗಳೆಲ್ಲ ಒಮ್ಮೆಲೆ ಕಾಂತದ ಕಡೆ ಧಾವಿಸಿ ಪಠಗಳೆಲ್ಲ ಕೆಳಕ್ಕುರುಳಿದುವು. ಸಿಮೆಂಟ್ ಕಾಂಕ್ರೀಟ್ ತಾರ್ಸಿಯೊಳಗಿದ್ದ ಕಬ್ಬಿಣದ ತಂತಿಗಳೆಲ್ಲ ಅದರ ಕಡೆ ಬಾಗಿದುವು. ಏಕೆ, ಕಬ್ಬಿಣದ ಧೂಳಿಂದ ತುಂಬಿದ್ದ ಗೋಡೆಗಳೂ ಕೂಡ, ಕೋಣೆಯ ನಡುಭಾಗಕ್ಕೆ ಸರಿದುವು. ಇದ ರಿಂದಾಗಿ, ಆ ಹೊಸ ವಿಧಾನವೂ ಕೂಡ ಬೆಳಕಿಗೆ ಬರಲು ಅವಕಾಶ ದೊರೆಯಲಿಲ್ಲ

ಹೆಚ್ಚು ಆಹಾರ ಬೆಳೆಯಿರಿ, ಎಂಬ ಚಳುವಳಿಗೆ ಅವಶ್ಯ ಬೇಕಾಗಿರುವ ನೀರಾವರಿ ಸಹಾಯವನ್ನೊದಗಿಸಲು ಡಾ||ರು ಒಂದು ವೈಜ್ಞಾನಿಕ ಸೌಲಭ್ಯ ವನ್ನುವನ್ನು ಕಂಡುಹಿಡಿದರು. ಹತ್ತಿ ದಾರದ ಒಂದು ಎಳೆಯ ತುದಿಯನ್ನು ಒಂದು ಬಟ್ಟಲು ನೀರಿಗಿಳೀಬಿಟ್ಟರೆ, ನೀರು ಆ ದಾರದ ಮೂಲಕ ಮೇಲಕ್ಕೇರು ವುದನ್ನು ನಾವೆಲ್ಲ ನೋಡಿದೇವೆ. ಆದರೆ, ಭೂಮಿ ತಾಯಿಯ ಒಸರಿನಲ್ಲಿರುವ ಅಂತರ್ಗಂಗೆಗೆ ದಾರದ ಎಳೆಗಳ ತುದಿಗಳನ್ನು ಇಳೀ ಬಿಡುವುದರಿಂದ, ಆ ನೀರನ್ನು ಮೇಲಕ್ಕೆಳೆದು, ಅಂಥ ಎಳೆಗಳನ್ನು ಹೊಲ ಗದ್ದೆಗಳ ಕೆಳಭಾಗದಲ್ಲಿ, ಎರಡು ಎರಡೂವರೆ ಅಡಿ ಆಳದಲ್ಲಿ, ಹರಡಿದರೆ, ಸದಾ ಗಿಡಗಳ ಬೇರಿಗೆ ತಂಪೆರೆಯಬಹುದೆಂದು ನಮ್ಮಲ್ಲಿ ಎಷ್ಟು ಜನಕ್ಕೆ ಹೊಳೆದಿದೆ? ಡಾ||ರಿಗೆ ಇದು

ಹೊಳೆಯಿತು. ತಮ್ಮ ಹಿತ್ತಲಲ್ಲಿ ಅವರು ಪ್ರಯೋಗ ನಡೆಸಿ, ಹತ್ತಿ ದಾರಗಳನ್ನಿಳಿಬಿಟ್ಟರು. ನೀರು ಮೇಲಕ್ಕೇರಿತು. ಗಿಡಕ್ಕೆ ತಂಪು ನಿಂತಿತು. ಆದರೆ, . ...ಅಕ್ಕಪಕ್ಕದ ಮನೆ ಭಾವಿಗಳೆಲ್ಲ ಬತ್ತಿದುವು. ಕನ್ನಂಬಾಡಿ ಕೆರೆಯು ಮಟ್ಟವೂ ಕಡಮೆಯಾಯಿತು. ಮೆಟ್ಟೂರಿಂದ ಮದ್ರಾಸಿಗೆ ತಂತಿ ಹೋಯಿತು. ಬೊಂಬಾಯಿ ಬಂದರಲ್ಲಿದ್ದ ಹಡಗುಗಳೆಲ್ಲ ಕೆಸರಲ್ಲಿ ಹೂತು ಹೋದುವು. ತಾನು ಮಾಡಿದ ಅನಾಹುತದ ಅರಿವು ಡಾ|| ಗೆ ಉಂಟಾಯಿತು. ಅವರು ದಾರವನ್ನು ಎಳೆದು ಬಿಸಾಕಿದರು. ಅದನ್ನು ಕುರಿತು ಬರೆದಿದ್ದ ಪ್ರಚಾರ ಪುಸ್ತಕವನ್ನು ಮುಖ್ಯಪ್ರಾಣನ ಮೂಲಕ ಒಲೆಯೊಳಕ್ಕೆ ನೂಕಿದರು.

" ಶ್ರೇಯಾಂಸಿ ಬಹು ವಿಘ್ನಾನಿ " ಎಂದು ಗೊಣಗುಟ್ಟಿದರು.

— ಪಾಟೀಳಿ.

## — ಗುಂಡ —

ನಿಮ್ಮ ಮೇಷ್ಟರು ಇಂದು ಮೂರ್ಛೆ ಬಿದ್ದರಂತಲ್ಲೋ ಗುಂಡ
ಮೂರ್ಛೆ ರೋಗಿಷ್ಟರೇನೋ ಅವರು ?
ರೋಗಗೀಗಗಳು ಒಂದು ಇಲ್ಲಣ್ಣಾ ಇಂದು ತಾನೇ ಒಂತು
ಮೇಷ್ಟ್ರಾ ಗ್ರೇಡ್ ಇಕ್ರಿಮೆಂಟ್ ಆರ್ಡರ‍್ರು !

ಏನಯ್ಯಾ ಗುಂಡಪ್ಪ !ಕೋರ್ಟಿನಲಿ ನಿನ್ನಪರ ವಾದಿಸಲು
ಬೇಕೇನು ಯಾರಾದರೂ ಲಾಯರುಗಳು ?
ಏನು ಬೇಡೀ ಸ್ವಾಮಿ, ಲಾಯರಿದಕೇಕೆ ? ದೊರತಿದರೊಬ್ಬ
ನನ್ನ ಹಳೆಪಳೆಯ ಸಾಕ್ಷಿಗಳು ಸಾಕು

# ವಚನಗಳು

— ೧ —

ಕೈಗೆ ಕೈ ತಗುಲಿದರೆ, ಚಪ್ಪಾಳೆಯಾಗುವುದೆ, ಹರ್ಷ ಹುಟ್ಟದ ಮೇಲೆ? ವೇಷವ ಧರಿಸಿದರೆ, ದ್ವೇಷ ಹರಿದಂತಾಯಿತೆ, ಲೋಭ ಸುಡದ ಮೇಲೆ? ಗುಂಪಲ್ಲಿ ಗೋವಿಂದ, ಎಂದೊದರಿದೊಡೆ, ಉಂಬಲ್ಲಿ ಉಡುವಲ್ಲಿ ನಡೆವಲ್ಲಿ ನುಡಿವಲ್ಲಿ ಗೋವಿಂದ ಎಂದಂತಾಯಿತೆ ? ಹತ್ತು ಮಾತಾಡಿದರೆ, ಮುತ್ತು ಮಾತಾಡಿದಂತಾಯಿತೆ? ಅಂತರಂಗ ಸ್ವಂತರಂಗ ಎರಡನೂ ಕೂಡಿಸುವದಸಾಧ್ಯಕಣಾ, ಹೇಳಿದಳು ಕೊರವಂಜಿ ಕಾಯುವಪರಂಜ ದೇವಿ.

ಮೂಡುವ ಮೂಗಿಗೆ ಮೂಗುತಿ; ನೀಡಿದ ಹಸ್ತಕ್ಕೆ ಲಂಚ; ನೋಡಿದ ಕಣ್ಣಿಗೆ ಕಾಡಿಗೆ; ಅಕ್ಕಪಕ್ಕದ ಕುಂಭಕರ್ಣಗಳಿಗೆ ಬೆಂಡೋಲೆ; ಹೊಗಳುವ ಬಾಯಿಗೆ ಭಂಗಾರ ಬೊಗಳುವ ಬಾಯಿಗೆ ಕಡುಬು; ಜೋಡಿಸಿದ ಕೈಗಳಿಗೆ ವರಪ್ರಸಾದ.... ಆಹಾ! ಬಡ ಎತ್ತಿಗೆ ಮೂಕ ಪ್ರಾಣಿಗೆ ಧರಣಿ ಮೇಲಿನ ಹುಲ್ಲೇ ಗತಿ, ಕಣಾ, ಕೊರಗಿದಳು, ಕೊರವಂಜಿ ಕಾಯುವಪರಂಜಿ ದೇವಿ.



ಸುತ್ತಿಗೆ ಇಲ್ಲದೆ ಇದ್ದರೆ ಬಿಡೆ!
ಆ ಪುಳ್ಳಂಗಾಯಿ ಉಂಡೆ ಕೊಡೇ!

# "ಚಪ್ಪಲೀಗೆ ಮೊಳೆ ಹೊಡೆಯುವವ"

ಅವಸರದಲ್ಲಿ ಅಜ್ಜಿ ನೋಡಿಕೊಂಡು ಒರ್ರೋಣ ಏನೋ ಖಾಯಿಲೆಯಂತೆ ಅಂತ ಬೇಗ ಬೇಗ ಸೈಕಲ್ಲಿನ ಮೇಲೆ ಹೋಗ್ತಿದ್ದರೆ, ಪಿಸ್ತೂಲು ಹೊಡೆದ ಹಾಗೆ ಟೈರು ಟಫಾರ್ ಅಂದುಬಿಡೋದೇ !

ಕೆಳಗಿಳಿದು ನೋಡಿದರೆ ಹೊಸಾ ಹೊಸ ಮೊಳೆ ಟೈರನ್ನು ಹರಿದಿದೆ. ಇದೆಲ್ಲಿಂದ ರಸ್ತೇಲಿ ಬಂತು ಅಂತನೋಡಿದರೆ ಅಲ್ಲೇ ಈ ಬೂಡ್ಸು ರಿಪೇರಿ ಮಾಡ್ತಾರಲ್ಲಾ ಅವರಲ್ಲೊಬ್ಬನ ಹಾದಿ ಅಂಗಡಿ. ಅವನಿಗೇ ನೋಡಿ ಎಲ್ಲೂ ಇಲ್ಲದ ಸ್ವಾತಂತ್ರ್ಯ ಬಂದಿರೋದು ನಿಂತಲ್ಲಿ ಅಂಗಡಿ. ಕೂತಲ್ಲಿ ಕಾಸು. "ಬನ್ನಿ ಸಾರ್, ಬನ್ನಿ ಸಾರ್ ತಾಜಾ ಮೊಳೆ ಹೊಡೆದು ಕೊಡ್ತೇನೆ ಚಪ್ಪ ಲೀಗೆ, ಮೂರು ವರ್ಷ ಆದರೂ ಚಪ್ಪಲಿ ಸವೆಯಲ್ಲ. ಮೂರೇ ಆಣಿ ಆರು ಮೊಳೇಗೆ" ಅಂತಾನೆ. ಹಾಗೇ ಅವನು ಜೀವನ ನಡೆಸೋದು.

ಇವನ ಜೀವನ ಹಾಗಿರಲಿ, ಇವನಿಂದ ಆ ಟೈರು ಮಾಡುವವರು, ಪಂಕ್ಚರ್ ರಿಪೇರಿ ಮಾಡುವವರು ಎಲ್ಲರದೂ ಜೀವನ ನಡೆಯೋದು. ಇವರ ಜೀವನದ ಉಪಾಯ ಸೈಕಲ್ ಸವಾರರ ಅಪಾಯ.

ಅವನಿಗೆ ಹಾದೀಲಿ ನಿಂತು ಬುದ್ಧಿ ಹೇಳಲು ಸಾಧ್ಯವೇ ನೀವೇ ಹೇಳಿ: ನಮಗೆ ವಾಹನ ಖರಾಬು. ಅವನ ಕೈಲಿ ಒಂದು ಜತೆ ಚಪ್ಪಲಿ—ಆಯುಧ ಪಾಣಿ. ಇವನಿಗೆ ಹೇಗೆ ಬುದ್ಧಿ ಕಲಿಸೋದು ಅಂತಲೇ ಯೋಚನೆ.

ಕಡೇಗೇ ಈ ಮುಂಡೇಗೇ ಹೊಳೀತು ನೋಡಿ—

* * *

ಒಂದು ನೂರು ಮೊಳೆ ಕೊಂಡುಕೊಂಡೆ. ಪೌರ ಭವನದ ಹತ್ತಿರ ಪ್ರ. ಪ್ರ. ಸಭೆ ಸೇರಿದಾಗ ಸಾಯಂಕಾಲ ನಾಲ್ಕು ಗಂಟೆ ಹೊತ್ತಿಗೆ ಹೋದೆ. ಅಲ್ಲಿ ನೆರೆದಿತ್ತಲ್ಲಾ ! ನೂರಾರು ಹದಿನಾರಡಿ ಹುಲಿಗಳ ತರಹ ದೊಡ್ಡ ದೊಡ್ಡ ಮೋಟಾರುಗಳು ! ಆ ರಸ್ತೆಯಲ್ಲೆಲ್ಲಾ ವೈನವಾಗಿ ಈ ಮೊಳೆಗಳನ್ನೆಲ್ಲಾ ಹಂಚಿದೆ—

ಮಾರನೆ ದಿನ ಬೆಳಿಗ್ಗೆ ಪೇಟೆ ಕಡೆ ಹೋದೆ. ಅಲ್ಲೇ ಒಬ್ಬ ಮೊಳೆ ಹೊಡೆಯುವ, ಚಪ್ಪಲಿ ರಿಪೇರಿಯ ಶಿಷ್ಯ ದೊರಕಿದ. ಅವನಿಗೆ ಹೇಳಿದೆ. ನನ್ನ ಪಾಪಾಸಿಗೆ ಮೂರಾಣೆ ಮೊಳೆ ಹೊಡೆದುಕೊಡು. ಆರಾಣೆ ಕೊಡುತ್ತೇನೆ. ಆದರೆ ನೀನು ಪುರಸಭೆಯ ಹತ್ತಿರವೇ ಹೊಡೆದುಕೊಡು. ಅಂತ. ಅರಿಯದ ಪ್ರಾಣಿ ಒಪ್ಪಿದ. ಪುರಸಭೆಯ ಹತ್ತಿರ ಹನ್ನೊಂದು ಗಂಟೆಗೆ ಬಂದ. ಚಪ್ಪಲೀಗೆ ಮೊಳೆ ಹೊಡೆಯುತ್ತಾ ನಿಂತ.

ಪ್ರ. ಪ್ರ. ಸಭೆಯವರು ಬಂದರು. ಹಿಂದಿನ ದಿವಸ ಅರ್ಧ ಹಾದಿ ನಡೆದಿದ್ದರು ಎಂಬುವುದು ಮಾರನೇ ಬೆಳಿಗ್ಗೆ ಅವರ ಮುಖದಲ್ಲೇ ಕಾಣುತ್ತಿತ್ತು. ಈ 'ರಿಪೇರಿ'ಯವನನ್ನು ನೋಡಿದರು. ಮೊಳೆಗಳನ್ನು ಕಂಡರು. ಹಿಂದಿನ ದಿವಸ ತಮ್ಮ ಕಾರುಗಳ—ಮುಂದಿನ ಅಥವಾ ಹಿಂದಿನ ಟೈರುಗಳು ನಿಟ್ಟುಸಿರು ಬಿಟ್ಟು ಮಧ್ಯರಸ್ತೆಯಲ್ಲಿ ಮಲಗಿದ್ದನ್ನು ಜ್ಞಾಪಿಸಿಕೊಂಡರು. ಮಿಕ್ಕ ಹಾದಿ ನಡೆದಿದ್ದನ್ನೂ ನೆನೆದರು.- "ಹುಶ್ಶಪ್ಪಾ" ಎಂದರು.

ಸಭೆಗೆ ಹೋದವರೇ ಒಂದು ನಿಲುವಳಿ ಸೂಚನೆ ತಂದರು. "ರಸ್ತೆಯಲ್ಲಿ ಹಾದಿಯಲ್ಲಿ ಮೊಳೆ ಹೊಡೆದು ಚಪ್ಪಲಿ ರೀಪೇರಿ ಮಾಡುವವರನ್ನು ಖಂಡಿತ ಸೆರೆಮನೆಗೆ ಸೇರಿಸಬೇಕು"ಅಂತ ಠರಾವು ಮಂಡಿಸಿದರು.

ಅಧ್ಯಕ್ಷರೂ ಹಿಂದಿನ ದಿವಸ ಕಾಲು ಹಾದಿ ನಡೆಯುವಂತಾಗಿದ್ದರಂತೆ. ಆದರೆ ಪ್ರಮಾದ ವಶದಿಂದ ಸ್ನೇಹಿತರೊಬ್ಬರ 'ಕಾರು' ಬಂದಿದ್ದರಿಂದ ಆ ಪ್ರಯಾಸ ತಪ್ಪಿತ್ತಂತೆ. ಅವರು ಸಹಾನುಭೂತಿ ತೋರಿಸಿ ಈ ನಿಲುವಳಿ ಸೂಚನೆಗೆ ಅವಕಾಶ ಇತ್ತರು. ಬೊಕ್ಕಸದ ಬೆಂಚಿನವರು—ಅವರೂ ಹಿಂದಿನ ದಿನ ಬಸ್ಸಿನಲ್ಲೇ ಹೋಗಬೇಕಾಗಿತ್ತಂತೆ—ಅವರೂ ಹ್ಞೂ ಅಂದರು.

ಸರ್ವರ ಅನುಮತಿಯಿಂದ ಈ ಠರಾವು ಒಪ್ಪಲ್ಪಟ್ಟಿತು.

*　　　*　　　*

ಈಗ ಧೈರ್ಯವಾಗಿ ಅಜ್ಜಿ ಖಾಯಿಲೆ ಅಂದರೆ ಅವಸರವಾಗಿ, ಬೈಸಿಕಲ್ಲಿನ ಮೇಲೆ ಹೋಗಿ, ದಿಟವಾಗಲೂ ಆಕೆಯನ್ನು ನೋಡಿಕೊಂಡು ಬರಬಹುದು ಎಂದು ಹಗಲು ಗನಸು ಕಾಣುತ್ತಿದ್ದೇನೆ.

ಶಿವಣ್ಣ.

——— o —

# ಶ್ರೀ ರಾಮುಡು

**ಮೇ ೨೮** :—ಈ ಊರಿನ ಗಣ್ಯ ವಿದ್ಯಾಭ್ಯಾಸಿ, ದೇಶಮಾತೆಯ ಭಕ್ತ ಕುವರ, ಇಪ್ಪತ್ತುನಾಲ್ಕು ವರ್ಷದ ಶ್ರೀರಾಮುಡು, ಇ.ಪಿ.ಎಸ್.ರವರಿಗೆ ವಿಶ್ವ ವಿದ್ಯಾನಿಲಯದವರು ಈ ದಿನ ಇ.ಸಿ.ಪಿ.ಎಸ್. ಪದವಿಯನ್ನು ಕರುಣಿಸಿ, ಉಚ್ಚಶಿಕ್ಷಣಕ್ಕಾಗಿ ರಾಜಧಾನಿಗೆ ಆಹ್ವಾನಿಸಿರುವರು. ಇದರಿಂದ ಅವರ ಬಂಧು ಬಳಗದವರು ಆನಂದಸಾಗರದಲ್ಲಿ ಮುಳುಗಿರುವರು. ಶ್ರೀಮತಿ ರಾಮುಡು ರವರನ್ನು ಪತ್ರಿಕಾಪ್ರತಿನಿಧಿಗಳು ಭೇಟಿ ಮಾಡಿದಾಗ, ಅವರು "ಎಲ್ಲವೂ ದೈವೇಚ್ಛೆ" ಎಂದರು.

**ಮೇ ೩೦** :—ಶ್ರೀರಾಮುಡುರವರು ಇನ್ನೂ ತಮ್ಮ ಪ್ರವಾಸದ ವಿಷಯ ವನ್ನು ಕೂಲಂಕಷವಾಗಿ ವಿಮರ್ಶಿಸಿಲ್ಲವಂತೆ.

**ಜೂನ್ ೧** :—ಈ ದಿನ ಬೆಳಗ್ಗೆ ನಾರಣಪ್ಪನ ಫಲಹಾರ ಮಂದಿರದಲ್ಲಿ, ಶ್ರೀರಾಮುಡುರವರು ನಿಮ್ಮ ವಿಶೇಷ ಬಾತ್ಮಿದಾರನಿಗೆ ಇತ್ತ ಹೇಳಿಕೆಯಿಂದ, ಅವರು ತಮ್ಮ ಮೇಲೆ ಬಂದಿರುವ ಕ್ಷುಲ್ಲಕ ಟೀಕೆಗಳನ್ನೆಲ್ಲ ಖಂಡಿಸಿದರು. ತಾವು ತಮ್ಮ ಮುಂದಿನ ವಿದ್ಯಾಭ್ಯಾಸಕ್ಕಾಗಿ ಮಾವನ ಕೈ ಕಾಯುತ್ತಿಲ್ಲವೆಂದೂ, ತಂದೆ ಯೊಂದಿಗೆ ಜಗಳವಾಡಿಲ್ಲವೆಂದೂ ಅಧಿಕೃತವಾಗಿ ತಿಳಿಸಿದರು.

**ಜೂನ್ ೩** :—"ಕಳೆದ ಎಂಟು ವರ್ಷಗಳ ಸತತ ತ್ಯಾಗ ಜೀವನ ಈಗ ಫಲಿಸಿತು" ಎಂದು ಶ್ರೀರಾಮುಡು ಗೆಳೆಯ ಗೋವಿಂದಪ್ಪನಿಗೆ ಈ ಸಂಜೆ ಹೇಳಿಕೆ ಇತ್ತರು.

**ಜೂನ್ ೧೫** :—ಸದ್ಯದಲ್ಲೇ ಪರಸ್ಥಳಕ್ಕೆ ತೆರಳಲಿರುವ ಶ್ರೀರಾಮುಡು ಅವರಿಗೆ ಇಲ್ಲಿಂದ ಬಸ್ ಹತ್ತಲು ಶುಭ ಲಗ್ನವನ್ನು ಸ್ಥಳೀಯ ಜೋಯಿಸ ಮಂಡಲಿಯವರು ನಿರ್ಧರಿಸಿ ತಿಳಿಸಿರುವರಂತೆ. ಆದರೆ, ಇದರ ಬಗ್ಗೆ ನಿರ್ದಿಷ್ಟ ವಿವರಗಳು ಇನ್ನೂ ಹೊರಬಿದ್ದಿಲ್ಲ.

**ಜೂನ್ ೧೮** :—ಈ ಊರಿನ ಅಖಿಲಭಾರತ ಜೈಹಿಂದ್ ಬ್ಯಾಡ್‌ಮಿಂಟನ್ ಕ್ಲಬ್ಬಿನ ಸದಸ್ಯರೂ, ಟೂರ್ನಮೆಂಟ್ ಟೀಮುಗಳಲ್ಲಿ ತಮ್ಮ ಸ್ಥಾನವನ್ನು ತ್ಯಾಗ ಮಾಡಿ, ಜಯ ಸಾಧನೆಗೆ ಅವಕಾಶ ಕಲ್ಪಿಸಿಕೊಟ್ಟವರೂ ಆದ, ಶ್ರೀರಾಮುಡು ಇ.ಸಿ.ಪಿ.ಎಸ್.ರವರಿಗೆ ಅವರ ಕೆಲವೇ ಕೆಲವು ಗೆಳೆಯರು ಈ ದಿನ ಬೆಳಗ್ಗೆ ಹೊಳೆದಂಡೆಯಲ್ಲಿ ಬೀಳ್ಕೊಡುವ ಸಮಾರಂಭವೊಂದನ್ನೆಸಗಿದರು

**ಜೂನ್ ೧೯** :—ಆಹಾರಾಭಾವದ ದೆಸೆಯಿಂದಲೂ, ಮಾನ್ಯ ಮಂತ್ರಿಗಳ ಸೂಚನೆಗನುಸಾರವಾಗಿಯೂ, ತಮಗೆ ಊರಿನವರಾರೂ, ಫಲಹಾರ, ಉಪಾ

ಹಾರ, ಭೋಜನ, ಪಾನಕ ಪಣಿಯಾರಗಳನ್ನು ಕೊಟ್ಟು ಸತ್ಕರಿಸಬಾರದೆಂದು ಶ್ರೀರಾಮುಡು ಅವರು ಕಟ್ಟಪ್ಪಣೆ ಮಾಡಿರುವಂತೆ ತೋರುತ್ತದೆ. ಏಕೆಂದರೆ, ಇದುವರೆಗೂ, ಅವರಿಗಾಗಿ ಅಂಥ ಏರ್ಪಾಟು ಯಾವುದೂ ಈ ಊರಲ್ಲಿ ನಡೆದಿಲ್ಲ.

**ಜೂನ್ ೨೦** :—ಎಸ್.ಪಿ.ಟಿ.ಎಸ್. ಬಸ್ ಕಛೇರಿಗೆ ಪ್ರಮುಖ ತರುಣರಾದ ಶ್ರೀರಾಮುಡುರವರು ಭೇಟಿ ಕೊಟ್ಟು, ತಾ|| ೨೨ ರಂದು ತಮಗೊಂದು ಫ್ರಂಟ್ ಸೀಟ್ ಬೇಕೆಂದು ಸೂಚಿಸಿದರೆಂದು ನಂಬಲರ್ಹವಾದ ಕಡೆಗಳಿಂದ ಸುದ್ದಿ ಬಂದಿದೆ.

**ಜೂನ್ ೨೧** :—ಶ್ರೀಮತಿ ರಾಮುಡುರವರು ಈ ದಿನ ಮಧ್ಯಾಹ್ನ, ಭೋಜನಕ್ಕೆ ಮೊದಲೇ, ತವರು ಮನೆಗೆ ಪ್ರಯಾಣ ಮಾಡಿದ್ದು, ಮಹಿಳಾ ಗುಂಪಿನಲ್ಲಿ ಕಳವಳವನ್ನೆಬ್ಬಿಸಿದೆ.

**ಜೂನ್ ೨೨** :— ಶ್ರೀರಾಮುಡುರವರು ಬೆಳಗ್ಗೆ ೧೦ ೩೦ ರೊಳಗೆ ಸ್ನಾನ ಭೋಜನಾದಿಗಳನ್ನು ಮುಗಿಸಿ, ತನ್ನ ತಾಯಿಗೂ ಅಜ್ಜಿಗೂ ನಮಸ್ಕಾರ ಮಾಡಿ, ಮನೆಯಿಂದ ಹೊರಬಿದ್ದು ದಾರಿಯಲ್ಲಿ ಸಿಕ್ಕಿದ ಹನುಮಂತರಾಯನ ಗುಡಿ ಯೆದುರು ಕೈಮುಗಿದು, ಬಸ್ ಸ್ಟ್ಯಾಂಡನ್ನು ೧೦-೫೦ಕ್ಕೆ ತಲಪಿದರು. ೧೧-೩೦ಕ್ಕೆ ಬಸ್ಸು ನಮ್ಮೂರನ್ನು ಬಿಟ್ಟು ಕದಲಿತು. ನಾರಣಪ್ಪನವರು ಶ್ರೀಯುತರಿಗೆ ಒಂದು ಬೂಂದಿ ಪೊಟ್ಟಣವನ್ನು ಕೊಟ್ಟಾಗ ಫೋಟೋ ಸಮಾರಂಭ ನಡೆಯಿತು. ಊರಿನವರಿಗೆ ಸಂದೇಶ ಕೊಡುತ್ತಾ, ಶ್ರೀರಾಮುಡು ಅವರು, "ದಯವಿಟ್ಟು ನಾನು ಹಿಂತಿರುಗುವುದರೊಳಗೆ ಹೆಚ್ಚು ಆಹಾರ ಬೆಳೆಯಿರಿ" ಎಂದರು. ಅದೇ ಬಸ್‌ನಲ್ಲೇ ರಾಜಧಾನಿಗೆ ಪ್ರಯಾಣ ಬೆಳೆಸಿದ ಆಕ್ಟಿಂಗ್ ಅಮಿಲ್ದಾರರು ಶ್ರೀಯುತರಿಗೆ ಹಸ್ತಲಾಘವವಿತ್ತು ಶುಭಾಶಯ ಕೋರಿದ್ದು ಕರುಣಾಜನಕ ವಾಗಿತ್ತು.

**ಜೂನ್ ೨೨** :—ಶ್ರೀರಾಮುಡುರವರ ಬಸ್ಸು ರಾಜಧಾನಿಯ ಸುಂಕದ ಕಟ್ಟೆಯ ಹತ್ತಿರಕ್ಕೆ ಸುಸೂತ್ರವಾಗಿ ಬಂದಿದೆ.

**ಜೂನ್ ೨೨** :—ಶ್ರೀರಾಮುಡುರವರು ಪ್ರವಾಸ ಮುಗಿಸಿ, ರಾಜಧಾನಿ ಯನ್ನು ತಲಪಿದರು. ಪ್ರಯಾಣ ಹೇಗಿತ್ತು ಎಂದು ನಮ್ಮ ವಿಶೇಷ ಬಾತ್ಮೀ ದಾರರು ಅವರನ್ನು ಕೇಳಿದಾಗ, ಇತರ ದೇಶಗಳಲ್ಲಿ ರಾಷ್ಟ್ರೀಕರಣ ಮಾರ್ಗಾನು ಕೂಲ ವ್ಯವಸ್ಥೆಗಳು ಹೇಗಿವೆಯೋ ಎಂದು ಪರಿಶೀಲಿಸಿದವರನ್ನು ಮಾತ್ರ ಕೇಳ ಬೇಕಾದ ಪ್ರಶ್ನೆ ತಮ್ಮದು ! " ಎಂದು ಹೇಳಿ, ಮಂದಸ್ಮಿತ ಬೀರಿದರು. ಚೀಲ ಗಳನ್ನೂ ಹೊತ್ತು, ಊರೊಳಕ್ಕೆ ನಡೆದರು. ಅವರನ್ನು ಸ್ವಾಗತಿಸುವುದ ಕ್ಕಾಗಿಯೋ ಎಂಬಂತೆ, ಪಕ್ಷಿಗಳು ಚಿಲಿಪಿಲಿಗುಟ್ಟಿದುವು.

---

# ಅಮೂಲ್ಯ ಸಲಹೆ

(ಪ್ರಾರಂಭ ಭಾಷಣಗಳಿಂದ)

**ಕೈಗಾರಿಕಾ ಸಂಸ್ಥೆ**:—ಕೈಗಾರಿಕೆಗಳು ಅಭಿವೃದ್ಧಿಯಾಗುವುದು ಅತ್ಯಗತ್ಯ. ಆದರೂ, ಈಗಿನ ಪರಿಸ್ಥಿತಿಯಲ್ಲಿ ನೀವು ಮಾಡಬೇಕಾದ ಮುಖ್ಯ ಕೆಲಸ ಬೇರೊಂದಿದೆ: ನೀವು ಆಹಾರ ಬೆಳೆಯಬೇಕು. ಅತ್ತಕಡೆ ನಿಮ್ಮ ಸಂಪೂರ್ಣ ಗಮನ ವಿರಲಿ.

**ಸಂಗೀತ ಪರಿಷತ್ತು**:—ಸಂಗೀತ ಹೆಚ್ಚು ಹೆಚ್ಚು ಪ್ರಚಾರವಾಗುವುದಗತ್ಯ. ಆದರೂ, ಈಗಿನ ಸನ್ನಿವೇಶದಲ್ಲಿ ನೀವು ಬೇರೊಂದು ಮುಖ್ಯ ಕೆಲಸಕ್ಕೆ ಕೈ ಹಚ್ಚಬೇಕಾಗಿದೆ. ನೀವು ಸೈನ್ಯಕ್ಕೆ ಸೇರಿ, ದೇಶರಕ್ಷಣೆ ಮಾಡಬೇಕು....

**ಗ್ರಾಮ ನಿರ್ಮಲೀಕರಣ ಸಮಾರಂಭ**:—ಗ್ರಾಮ ನಿರ್ಮಲೀಕರಣ ಅತಿ ಮುಖ್ಯವೆಂದು ನಾನೂ ಭಾವಿಸುತ್ತೇನೆ. ಆದರೂ, ನೀವು ಬೇರೊಂದು ತೆರದ ದೇಶಸೇವೆಯನ್ನು ಅತ್ಯಗತ್ಯವಾಗಿ ಮಾಡಬೇಕಾಗಿದೆ. ಕನ್ನಡಕ್ಕೆ ಒಂದು ವಿಶ್ವಕೋಶವಿಲ್ಲದಿರುವುದು ತುಂಬಾ ನಾಚಿಕೆಗೇಡು .

**ಕ್ರಿಕೆಟ್ ಆಟಗಾರರ ಔತಣ**:—ಕ್ರೀಡಾರಂಗದಲ್ಲಿ ನೀವು ಆಸಕ್ತರಾಗಿರುವುದು ಬಹಳ ಶ್ಲಾಘನೀಯ. ಆದರೂ, ನೀವು ಸಂಸ್ಥಾನದ ಏಳಿಗೆಗಾಗಿ ಬೇರೊಂದು ಕೇತ್ರದಲ್ಲಿ ದುಡಿಯಬೇಕಾಗಿದೆ. ರೇಷ್ಮೆಹುಳ ಸಾಕುವ ಕೈಕಾರಿಕೆ ಈಚಿಗೆ ಬಹಳ ಕ್ಷೀಣದೆಸೆಗೆ ಬಂದು ಬಿಟ್ಟದೆ ....

**ಆಹಾರ ಪರಿಷತ್ತು**:—ಬಂಜೆ ಬಿದ್ದಿರುವ ಭೂಮಿಯನ್ನು ಸಾಗುವಳಿ ಮಾಡಿ ನೀವು ನೆರೆಹೊರೆಯವರಿಗೆಲ್ಲ ಆಹಾರ ನೀಡುತ್ತಿರುವುದು ಕೊಂಡಾಡತಕ್ಕ ಸೇವಾಕಾರ್ಯ; ಒಪ್ಪಿದೆ, ಆದರೂ, ಈಗ ಅತಿ ಮುಖ್ಯವಾದ ಬೇರೊಂದು ಕೆಲಸ ನಿಮ್ಮ ಮುಂದಿದೆ. ಚಲನ ಚಿತ್ರ ಪ್ರಪಂಚದ ನೈತಿಕ ಮಟ್ಟ ದಿನೇ ದಿನೇ ಇಳಿಮುಖವಾಗುತ್ತಿರುವುದು ನಿಮಗೆ ಗೋಚರವಾಗಿರಬಹುದು. ಅದನ್ನು ಮತ್ತೆ ಮೇಲೆತ್ತಿ.......

**ಸಾಹಿತಿಗಳ ಸಂಘ**:—ಸಾಹಿತ್ಯವೇ ಸರ್ವೋದಯದ ಮುಂಬೆಳಕು ಎಂದು ನೀವು ಹೇಳಿರುವುದನ್ನು ನಾನೂ ಅನುಮೋದಿಸುತ್ತೇನೆ. ಆದರೆ, ಇಂದು ದೇಶದ ಮುಂದಿರುವ ಮಹಾ ಸಮಸ್ಯೆ ಎಂದರೆ, ಸಾಹಿತ್ಯವಲ್ಲ; ಗ್ರಾಮನಿರ್ಮಲೀಕರಣ ನೀವು ಹಳ್ಳಿ ಹಳ್ಳಿಗೂ ಹೋಗಿ, ಬೀದಿ ಬೀದಿಗಳನ್ನೂ ಗುಡಿ ಗೋಪುರಗಳನ್ನೂ ಗುಡಿಸಿ, ಅವುಗಳನ್ನು.... ...... .

———o———

# ಲೀಲುವಿನ ಬಜ್ಜೆಟ್

—o—

ರವಿವರ್ಮನ ಉಯ್ಯಾಲೆಮೋಹಿನಿ ಚಿತ್ರ ನೋಡಿದ್ದಿರಲ್ಲವೇ. ಹಾಗಿದ್ದಾಳೆ ಲೀಲು. ಅಂದಮೇಲೆ ಮನೆ ಯಜಮಾನಿಕೆ ಯಾರದು ಅಂತ ಬೇರೆ ಹೇಳಬೇಕಾಗಿಲ್ಲ ಅಲ್ಲವೆ ?

ಲೀಲು ಸಂಸಾರ ಹೂಡಿದಾಗ ಗಂಡನಿಗೆ ಅರವತ್ತು ರೂಪಾಯಿ ಸಂಬಳ. ಫಸ್ಟ್‌ಕ್ಲಾಸು, ಫಸ್ಟು, ಎಂಭತ್ತು ನಂಬರು, ರೆಕಾರ್ಡು, ಇತ್ಯಾದಿ ಸಿಗಿದುಕೊಂಡು ಬಂದಿದ್ದ ಲೀಲು ಗಂಡನಿಗೆ ಅದೇ ಕಾಲೇಜಲ್ಲಿ ಕೆಲಸ ಸಿಕ್ಕಿದ್ದು ಹೆಚ್ಚೇನೂ ಅಲ್ಲ.

ಒಂದು ಸಣ್ಣ ಮನೆ. ಗಂಡ, ಹೆಂಡತಿ, ಅಂದ ಮೇಲೆ ಬರೋ ಸಂಬಳ ಸಾಕಾಗಬಹುದು. ಅಂತಲೇ ಅಂದುಕೊಂಡು ಲೀಲು ಗಂಡ ಸಂಸಾರ ಹೂಡಿದ್ದ ಮೊದಲ ತಿಂಗಳು ಅವನೇ ಸಂಸಾರದ ಲೆಕ್ಕ ಎಲ್ಲಾ ಇಟ್ಟುಕೊಂಡ. ಆ ತಿಂಗಳೆಲ್ಲಾ ಲೀಲು ದಿನಾಲೂ ಇವತ್ತು ಅಕ್ಕಿ ಅಲ್ಲ, ಬೇಳೆ ಇಲ್ಲ, ಸಾಯಂಕಾಲ ಸೌದೆ ಇಲ್ಲ, ಸಾಸುವೆ ಇಲ್ಲ ಎಂದು ಹೇಳುತ್ತಲೇ ಇದ್ದಳು. ತಿಂಗಳ ಕೊನೆಗೆ ಇಬ್ಬರಿಗೂ ಬೇಜಾರು; ಆಗಲೇ ಲೀಲು ಹೇಳಿದ್ದು. "ಈ ತಿಂಗಳ ಸಂಬಳ ನನ್ನ ಕೈಗೆ ಕೊಡಿ, ಒಂದು ತಿಂಗಳು ನಾನು ಹೇಗೆ ಸಂಸಾರ ಮಾಡ್ತೀನಿ ಅನ್ನೋದು ನೋಡಿ" ಅಂತ.

ಲೀಲು ಗಂಡನಿಗೂ ಅಷ್ಟೇ ಬೇಕಾಗಿದ್ದು. ತಿಂಗಳಾಗುತ್ತಲೂ ಮೊದಲನೇ ತಾರೀಖು ಅವಳ ಕೈಲಿ ಅರವತ್ತು ರೂಪಾಯಿ ಹಾಕಿದ. ಆ ತಿಂಗಳು ನೋಡಿ ಲೀಲು ಗಂಡನ್ನ ಎರಡು ಸಾರಿ ಸಿನೀಮಾಕ್ಕೆ ಕರೆದುಕೊಂಡು ಹೋಗಿದ್ದಳು. ಒಂದು ಜೊತೆ ಪಂಚೆ ಕೊಂಡಿದ್ದಳು. ತಾನೂ ಒಂದು ಸೀರೆ ಕೊಂಡಿದ್ದಳು. ಗಂಡನಿಗೆ ಕೈ ಖರ್ಚಿಗೆ ಅಂತ ಐದು ರೂಪಾಯಿ ಕೊಟ್ಟಿದ್ದಳು. ದಿನಾಗಲೂ ಎರಡೂ ಹೊತ್ತೂ ಹೊಟ್ಟೆತುಂಬಾ ಊಟ ಹಾಕಿದ್ದಳು. ಎರಡು ಕಾಫಿ ಕೊಡುತ್ತಿದ್ದಳು.

ಮೂವತ್ತನೆ ತಾರೀಖು ಮಧ್ಯಾಹ್ನ ಗಂಡನ ಕೈಲಿ ಮೂರು ರೂಪಾಯಿ ಕೊಟ್ಟು, "ಇವತ್ತು ಸಾಯಂಕಾಲ ನನ್ನ ಸ್ನೇಹಿತೆ ಕಮಲು ಮನೆಗೆ ಬರುತ್ತಾಳೆ. ಒಂದಿಷ್ಟು ಮೈಸೂರು ವಿಳ್ಳೆದೆಲೆ ಒಂದು ಕುಚ್ಚು ಹೂವು ಒಂದಿಷ್ಟು ಹೋಟಲ ತಿಂಡಿ ತಂದುಕೊಡಿ" ಎಂದಳು.

ಗಂಡ ಊಟಮಾಡಿ ಕಾಲೇಜಿಗೆ ಹೋಗುವಾಗ ಯೋಚಿಸ ತೊಡಗಿದ. ಸಂಬಳ ಬಂದ ಮೂರನೆಯ ದಿನ ನನ್ನ ಕೈಲಿ ಒಂದು ಕಾಸೂ ಇರುವುದಿಲ್ಲ. ಇವಳು ಮೂವತ್ತನೆಯ ತಾರೀಖು ನನ್ನ ಕೈಲಿ ಮೂರು ರೂಪಾಯಿ ಇಟ್ಟಳಲ್ಲಾ! ಹೇಗೆ ಮಾಡಿದಳು? ಎಂಬ ಪ್ರಶ್ನೆ ಕುದಿಯತೊಡಗಿತು. ಸಾಯಂಕಾಲ ಬರುವಾಗ ಲೀಲು ಹೇಳಿದ್ದನ್ನೆಲ್ಲಾ ಮನೆಗೆ ತಂದ. ತನ್ನ ಕೊಠಡಿಯಲ್ಲಿ ಕುಳಿತು ಈ ಸಮಸ್ಯೆ ಬಿಡಿಸತೊಡಗಿದ. ಲೀಲು ತನ್ನ ಸ್ನೇಹಿತೆ ಕಮಲೂನ ಮಾತನಾಡಿಸಿ ತಿಂಡಿ ತಿನ್ನಿಸಿ ಅವಳನ್ನು ಅವಳ ಮನೆಗೆ ಕಳಿಸುವ ತನಕ.

ಆಗಲೇ ನಿರ್ಧರಿಸಿದ್ದು ಲೀಲು ಗಂಡ. ಈ ರಾತ್ರಿ ಊಟ ಆದ ಮೇಲೆ "ಸಂಸಾರ ಹೇಗೆ ಮಾಡಿದೆ? ನಿನ್ನ ಕೈಲಿ ತಿಂಗಳ ಕೊನೆಯಲ್ಲಿ ಹೇಗೆ ಮೂರು ರೂಪಾಯಿ ಸಿಕ್ಕಿತು" ಅಂತ ಕೇಳಿಯೇ ಬಿಡಬೇಕು ಅಂತ. ಅಲ್ಲಸಲ್ಲದ ಅಪಮಾನಗಳು ಅವನ ಮನಸ್ಸಿಗೆ ತೋಚದೆ ಇರಲಿಲ್ಲ.

ರಾತ್ರಿ ಊಟ ಆಯಿತು. ಪುಷ್ಕಳವಾದ ಊಟ ಆಯಿತು. ಮೈಸೂರು ಎಲೆ, ಮಡಿಸಿಕೊಟ್ಟ ಎಲೆ, ಮಡಿಸಿಕೊಟ್ಟ ಮೈಸೂರೆಲೆ ಜಗಿದಿದ್ದಾಯಿತು.

ಆಗ ಗಂಡ ಕೇಳಿದ.

"ಲೀಲೂ! ಈ ತಿಂಗಳು ನೀನು ಸಂಸಾರ ನಡೆಸಿದೆ. ತಿಂಗಳೆಲ್ಲಾ ನಿನ್ನ ಒಂದು ಪ್ರಶ್ನೆ ಕೇಳಲಿಲ್ಲ. ನೀನೂ ನನ್ನನ್ನು ಹಣ ಕೇಳಲಿಲ್ಲ. ಆದರೂ ಸಂಸಾರ ಚೆನ್ನಾಗಿಯೇ ನಿರ್ವಹಿಸಿದೆ. ಊಟ ಉಪಚಾರ, ಸಂಗೀತ, ಸಿನಿಮಾ, ಬಟ್ಟೆಬರೆ ಎಲ್ಲಾ ನಡೆಸಿದೆ. ಇದು ಅಸಾಧ್ಯ ಎಂದು ನನಗನ್ನಿಸುತ್ತೆ. ಆದರೆ, ಹೇಗೆ ಮಾಡಿದೆ?"

ಆಗ ಲೀಲು ಹೇಳಿದಳು.

"ಇದಕ್ಕೆಲ್ಲಾ ಮೊದಲೇ ಬಡ್ಜೆಟ್ ಗೊತ್ತುಮಾಡಿಕೊಳ್ಳಬೇಕು ಆ ಮೇಲೆ ಎಲ್ಲಾ ಸುಲಭ. ಸಂಪಾದಿಸುವವರಿಗೆ ಈ ಬಡ್ಜೆಟ್ ಸರಿದೂಗಿಸಲು ಬರೋದೇ ಇಲ್ಲ. ಅದಕ್ಕೇ ತಿಂಗಳೆಲ್ಲಾ ಕಷ್ಟಪಡುತ್ತಾರೆ. ನಾನೀಗ ನೋಡಿ ತಿಂಗಳ ಖರ್ಚೆಲ್ಲಾ ಪಟ್ಟಿ ಬರೆದಿಟ್ಟಿದ್ದೇನೆ. ಒಂದು ಗೆರೆ ದಾಟದೆ ಮಾಡಬೇಕಾದ್ದೆಲ್ಲಾ ಮಾಡಿದ್ದೇನೆ. ತಡೀರಿ! ನನ್ನ ಡೈರಿ ತಂದು ತೋರಿಸುತ್ತೇನೆ ಎಂದು ಒಳಗೆ ಹೋಗಿ ಡೈರಿ ತಂದಳು. ಓದಲಾರಂಭಿಸಿದಳು.

ತಾ|| ೧ :—ಜಮಾ ಅರವತ್ತು ರೂಪಾಯಿ. ಗಂಡನಿಗೆ ಕೈ ಖರ್ಚಿಗೆ ಐದು ರೂಪಾಯಿ.

ತಾ|| ೨ :—ಮುಸಿರಿಯುವಳಿಗೆ ೩ ರೂಪಾಯಿ—ಹಾಲು ಮೊಸರಿನವಳಿಗೆ ೬ ರೂಪಾಯಿ. ದಿನಸಿ ಅಂಗಡಿಯುವನಿಗೆ ೨೪ ರೂಪಾಯಿ. ಸೌದೆಗೆ ೪ ರೂ.

ತಾ|| ೪ :—ಸಿನೀಮಾಕ್ಕೆ, ಜಟ್ಕಾ, ಟಿಕೇಟು ಇತ್ಯಾದಿ ಎಲ್ಲಾ ಒಟ್ಟು ೬ ರೂಪಾಯಿ.

ತಾ|| ೬ :—ತರಕಾರೀಗೆ ೨ ರೂ. ಆಲೂಗಡ್ಡೆ, ಈರುಳ್ಳಿ ಎಲ್ಲಾ ಸೇರಿ.

ತಾ|| ೯ :—ಸಂಗೀತ ಕಛೇರಿಗೆ—ಜಿ. ಎನ್. ಬೀ ದು. ಒಟ್ಟು ೬ ರೂ.

ತಾ|| ೧೨ : - ಗೋಧೀಗೆ ೧ ರೂ. ಕಾಫೀ ಬೀಜಕ್ಕೆ ೧ ರೂ.

ತಾ|| ೧೪-೧೬ ವರೆಗೆ ಹೋಟಲಿನಿಂದ ತರಿಸಿದ ದಿನಕ್ಕೆ ಎರಡೂಟದಂತೆ ಮೂರು ದಿನಕ್ಕೆ ೪–೮–೦ ರೂಪಾಯಿ.

ತಾ|| ೧೯ :— ಸಿನೀಮಾಕ್ಕೆ—"ಹಂಜೋಲಿ" ಕಮಲು ನೋಡಿಕೊಂಡು ಬಂದು ಹೇಳಿದಳಲ್ಲ ಬಲು ಚೆನ್ನ ಅಂತ—ಅದೂ ಅಂದ್ರೆ—ಅದಕ್ಕೆ ಒಟ್ಟು ಖರ್ಚು ೫–೮–೦ ರೂಪಾಯಿ.

ತಾ ೨೨ :—ಕಾಫೀ ಬೀಜಕ್ಕೆ ೧ ರೂ. ಅವತ್ತೇ ಅಂದ್ರೆ ಈ ಸೀರೆ ತಂದಿದ್ದು. ಪ್ರಿಂಟೆಡ್ ಸೀರೆ ಎಷ್ಟು ಚೆನ್ನಾಗಿತ್ತು ಅಂತೀರಿ ಅಂಗಡೀಲಿ, ಎಂಟೇ ರೂಪಾಯಿ. ಒಂದೇ ಇತ್ತು. ನನ್ನ ಹಿಂದೇನೆ ಕಮಲೂನು ಬರ್ತಿದ್ದಳು. ನಾನು ತೊಗೊಳ್ಳದೇ ಇದ್ದಿದ್ದರೆ ಅವಳೇ ತೊಗೊಂಡುಬಿಡ್ತಿದ್ದಳು. ಅದಕ್ಕೇ ಅದನ್ನು ತೊಗೊಂಡೆ. ನಂಗೆ ಮಾತ್ರ ಏಕೆ ಎಂತ ನಿಮಗೂ ಒಂದು ಜತೆ ಪಂಚೆ ತೆಗೊಂಡೆ, ಹೇಗೂ ನಿಮ್ಮ ಪಂಚೆ ಅಂಚುಹರಿದಿತ್ತಲ್ಲಾಂತ. ಅದಕ್ಕೆ ೪ ರೂಪಾಯಿ.

ಆಗಲೇ ನೋಡಿ ಹಣ ಕೈಲಿ ಇಲ್ಲದ್ದು ಗೊತ್ತಾಯಿತು. ಇನ್ನೊಬ್ಬರ ಹತ್ತಿರ ಸಾಲ ಮಾಡಬಾರದು ಅಂತ ನೀವೂ ಹೇಳ್ತಿರ್ತೀರಿ, ನಮ್ಮ ತಂದೇನೂ ಹೇಳ್ತಿರ್ತಾರೆ. ಅದಕ್ಕೇ ಏನಪ್ಪಾ ಮಾಡೋದು ಅಂತಿದ್ದೆ. ಈ ಖರ್ಚು ಮಾಡದೆ ಬೇರೆ ಗತಿ ಇಲ್ಲ. ಹೇಗಪ್ಪಾ ಬಡ್ಜೆಟ್ ಸರಿದೂಗಿಸೋದು ಅಂತ. ಆಗಲೇ ನೋಡಿ ನಿಮ್ಮಮ್ಮ ನನಗೆ ಕೊಟ್ಟಿದ್ದ ರಾಗಟೆ ಜ್ಞಾಪಕಕ್ಕೆ ಬಂದಿದ್ದು. ಈಗಿನ ಕಾಲದಲ್ಲಿ ರಾಗಟೆ ಯಾರು ಹಾಕ್ಕೊತಾರೆ ಅಂದರೆ. ಅಲ್ಲದೆ ಈ ಕಮ್ಯೂನಿಸಂ ಅಂತೆ, ಬಡವರ ರಾಜ್ಯ ಅಂತೆ, ಕಾರ್ಮಿಕರ ಯಾಗ ಅಂತೆ, ಇಂತಹ ಕಾಲದಲ್ಲಿ ಚಿನ್ನ ಬೆಳ್ಳಿ ಯಾರ್ರಿ ನಿಧಿ ಇಡ್ತಾರೆ? ಅದನ್ನ ಕಮಲು ಗಂಡನ ಕೈಲಿ ಮಾರಿಸಿದೆ. ನೂರಿಪ್ಪತ್ತು ರೂಪಾಯಿ ಬಂತ್ರೀ—ದಿಟವಾಗಲೂ ಅಷ್ಟಾಗುತ್ತೆ ಅಂತ ಗೊತ್ತಿರಲಿಲ್ಲ.

ತಾ|| ೨೪ :—ಅವತ್ತೇ ಅರಿಯಕುಡಿ ಸಂಗೀತಕ್ಕೆ ಹೋಗಿದ್ದು. ಅವತ್ತು ಬಸ್ಸೇ ಸಿಕ್ಕಿತು, ೪ ರೂ.ನೇ ಖರ್ಚು.

ತಾ|| ೨೯ :—ನಿಮ್ಮ ಕೈಲಿ ಮೂರು ರೂಪಾಯಿ ಕೊಟ್ಟಿದ್ದು.

ಇನ್ನೂ ಒಂದಿಷ್ಟು ರೂಪಾಯಿದೆ ಅಂದ್ರೆ. ಪೈನವಾಗಿ ಮಾಡಬೇಕಾದ್ದನ್ನ ಮಾಡಲೇ ಬೇಕು. ಸುಖವಾಗಿ ಇರಲೇ ಬೇಕು—ಅಲ್ವವೇ ಅಂದ್ರೆ ?

ಗಂಡನಿಗೆ ಏನುಮಾತೂ ತೋಚದು. ಆ ರಾಗಟಿ ಅವರಮ್ಮ ೨೦ರುವತ್ತು ವರ್ಷ ಹಾಕಿಕೊಂಡಿದ್ದರು ಅದಕ್ಕೆ ಹಿಂದೆ ಅವರತ್ತೆ ೪೦ ವರ್ಷ ಹಾಕಿಕೊಂಡಿದ್ದರಂತೆ. ಕಷ್ಟಕಾಲಕ್ಕೆ ಅಂತ ನಿಧಿ ಇರಲಿ ಅಂತ ಅವರಿಟ್ಟಿದ್ದನ್ನೆಲ್ಲಾ ಹೀಗೆ ತಿಂಗಳ ಖರ್ಚಿಗೆ—ವರ್ಷದ ಬಟ್ಟೆಗೆ ಅಂತ ಪೋಲುಮಾಡಿದಳಲ್ಲಾ ಅಂತ ದುಃಖ. ಆದರೆ ಲೀಲೂ ಆ ರವಿವರ್ಮನ ಬೊಂಬೆ ಇದ್ದ ಹಾಗೆ—ಇವನೇ ಮೆಚ್ಚಿ ಮಾಡಿಕೊಂಡಿದ್ದು - ಮಾತೇ ಆಡಲಿಲ್ಲ.

ಹಾಗೂ ಅಂದುಕೊಂಡ—

ನನ್ನ ಸಂಸಾರ ಮಾತ್ರ ಏನೂ, ಯಾವ ಸಂಸಾರವೇ ಆಗಲಿ, ಯಾರ ಸಂಸಾರವೇ ಆಗಲಿ, ಕಡೆಗೆ ಯಾವ ಸರ್ಕಾರವೇ ಆಗಲಿ ಬಡ್ಜೆಟ್ ಸರಿದೂಗಿಸುವುದು ಅಂದರೆ ಹೀಗೇ ಅಲ್ಲವೆ ? ಎಂದು ಸಮಾಧಾನ ತಂದುಕೊಂಡ.

——o——

ಮೇ|| ಜ|| ಚೌಧುರಿಯವರು ಹೈದ್ರಾಬಾದಿನಲ್ಲಿ "ಮುಲ್ಕಿ"ಯಾಗುವ ಸಂಭವವಿದೆಯೆಂದೂ—ಹಾಗಾಗಲಿ ಎಂತಲೇ ಅಲ್ಲಿನ ಪ್ರಜಾಪ್ರಮುಖರು ಒಂದಾಗಿಲ್ಲವೆಂದೂ ಹೇಳುವುದು ಕುಹಕ.

* * *

ದೇಹ ಬೆಳವಣಿಗೆಗೆ ಬೇಕಾದ ಅಂಶಗಳೆಲ್ಲಾ "ಹುಲ್ಲಿ"ನಲ್ಲಿ ತುಂಬಾ ಇದೆಯಂತೆ. "ಅಮೇರಿಕಾದಲ್ಲಿನ ಪ್ರಯೋಗ"

—ಹುಟ್ಟಿಸಿದ ದೇವರು ಹುಲ್ಲು ಮೇಯಿಸೋದಿರಲಿ—ಹುಟ್ಟಿದ ಸರ್ಕಾರ ಕೂಡ ಇನ್ನೂ ಧೈರ್ಯವಾಗಿ, ಶಾಸ್ತ್ರೀಯವಾಗಿ ಹುಲ್ಲು ಮೇಯಿಸಬಹುದಲ್ಲಾ !

* * *

ಸರ್ದಾರ್ ಪಟೇಲರಿಗೆ "ಹೃದಯ ವೇದನೆ"ಯಾಗಿತ್ತಂತೆ.

—ಉತ್ತರ ಭಾರತದ ರಾಜ ಮಹಾರಾಜರುಗಳಿಗೆ ಆಶ್ಚರ್ಯವಂತೆ—ಅವರಿಗೆ ಹೃದಯ ಇದೆಯೇ ? ಅಂತ.

# ನಿಮ್ಮ ದೇಶಪ್ರೇಮಕ್ಕೊಂದು ಸವಾಲ್..........



ನಿಮ್ಮ ದೇಶದಬಗ್ಗೆ ನಿಮಗೆ
ಷ್ಟರಮಟ್ಟಿಗೆ ಪ್ರೀತಿ
ಇದೆಯೆಂಬುದು ಈ ಚಿತ್ರ
ದಿಂದ ಗೊತ್ತಾಗುತ್ತದೆ.



ಸ್ವತಂತ್ರಭಾರತದ ಹಿನ್ನೆಲೆ
ಯಲ್ಲಿ ತಯಾರಾಗಿ
ರುವ ಒಂದು ಅದ್ಭುತ
ಕಥಾವಸ್ತು



ದಿಗ್ದರ್ಶಕ:
**ಶ್ರೀ ವಿ. ಶಾಂತಾರಾಂ**
ರವರ

# ಅಪ್ನಾ ದೇಶ್
(ಹಿಂದಿ)

**ತಾ|| 9-7-49 ನೇ ಶನಿವಾರದಿಂದ ಅಮೋಘ ಪ್ರಾರಂಭ**

ನಿಮ್ಮ ನೆಚ್ಚಿನ ಬೆಂಗಳೂರು **ಪ್ರಭಾತ್** ಚಿತ್ರಮಂದಿರದಲ್ಲಿ

ಮೈಸೂರು : **ಪ್ರಭಾ ಪಿಕ್ಚರ್ ಹೌಸ್**



ದಾವಣಗೆರೆ : **ವಸಂತ ಟಾಕೀಸ್‌ನಲ್ಲಿ**

# ನಮ್ ನಾಡು
(ತಮಿಳ್)

ಬೆಂಗಳೂರು : **ರೂಪಮಹಲ್ ಚಿತ್ರಮಂದಿರದಲ್ಲಿ**

ಕೆ. ಜಿ. ಎಫ್. **ಕೃಷ್ಣಾ ಟಾಕೀಸ್‌ನಲ್ಲಿ**

ತಾರಾಗಣ : ಪುಷ್ಪಹಂಸ (ನೂತನ ತಾರೆ)- ಉಮೇಶ ಶರ್ಮ— ಮನ್‌ಮೋಹನ್ ಕೇಶವರಾವ್ ದಾತೆ— ವೀಣಾದೇವಿ.

ಹಂಚಿಕೆಗಾರರು :— **ಅಲಂಕಾರ್ ಚಿತ್ರ ಲಿಮಿಟೆಡ್,**

Tel 'ALANKAR' 7, ಕೆಂಪೇಗೌಡ ರೋಡ್, ಬೆಂಗಳೂರು 2.
Phone 2663

## ಪ್ರದರ್ಶನಕ್ಕೆ ಸಿದ್ಧವಾಗಿದೆ

### ಮಹಾತ್ಮಾರವರ

# ನಾಗಕನ್ನಿಕಾ



(ಪ್ರಥಮ ಕನ್ನಡ ಜಾನಪದ
ಕಥಾ ಚಿತ್ರ)

**ಪ್ರಧಾನ ಭೂಮಿಕೆಯಲ್ಲಿ :—**

ಜಯಶ್ರೀ—ಬಳ್ಳಾರಿ ರತ್ನಮಾಲಾ—ಪ್ರತಿಮಾದೇವಿ—ಟಿ. ಆರ್. ರಾಜಬಾಲಾ — ರಾಘವೇಂದ್ರರಾವ್ — ಜಿ. ಆರ್. ಸ್ಯಾಂಡೋ— ವೀರಭದ್ರಪ್ಪ — ಮಹಾಬಲರಾವ್ ಈಶ್ವರಪ್ಪ.

**ಸಂಭಾಷಣೆ.**—ಹುಣಸೂರು: ಸಂಗೀತ ಪಲವಾಂಗುಡಿ ಶಾಮು

**ಗೀತೆಗಳು :**—ಹುಣಸೂರು ಮತ್ತು ಎಂ. ಎಸ್. ಬಾಬು

ನಿರ್ದೇಶನ: ಜಿ. ವಿಶ್ವನಾಥ್

**ಪ್ರಡ್ಯೂಸರ್ :**
**ಡಿ. ಶಂಕರಸಿಂಗ್.**



**ಪ್ರೊಡಕ್ಷನ್-ಇನ್-ಛಾರ್ಜ್ :**
**ಬಿ. ವಿ. ಆಚಾರ್ಯ.**

Distributors for Mysore State,
Coorg, South Canara &
Ceded Dists,

**Shanta Pictures.**
Avenue Road,
BANGALORE 2

All rights with

**N. V. Gopal Setty,**
Jeweller's Chowk,
Avenue Road,
Bangalore 2.




# ಸ್ಪಷ್ಟವಾಗಿ ಹೇಳಿರಿ

ಶಾಲಿಮಾರ್ ಡ್ಯೂರೋಲೇಕ್ ಎನಾಮೆಲ್ ವರ್ಗದ ೨೨ ಆಕರ್ಷಣೀಯ ಬಣ್ಣಗಳು ಪ್ರತಿಯೊಂದೂ ಪ್ರಕಾಶಮಾನವಾದ, ಮಿರುಗುಟ್ಟುವ, ಗಟ್ಟಿ ಬಣ್ಣದ, ಪಿಂಗಾಣಿಯಂತೆ ಮೆರುಗುಳ್ಳದು. ಅತಿ ಬೇಗ ಒಣಗುವುದು ಒಳ ಕೆಲಸಕ್ಕೂ, ಫಿಟ್ಟಿಂಗುಗಳಿಗೂ, ಮೇಜು, ಕುರ್ಚಿ ಮೊದಲಾದ ಸಾಮಾನಿಗೂ ಆದರ್ಶ ಪ್ರಾಯವಾದುದು ಉತ್ತಮ ಫಲಿತ ಪಡೆಯಲು ಡ್ಯೂರೋಲೇಕ್ ಒಳ ಲೇಪನದ ಮೇಲೆ ಹಚ್ಚಿರಿ.

## ಶಾಲಿಮಾರ್ ಡ್ಯೂರೋಲೇಕ್

ಆದರ್ಶವಾದ ಎನಾಮೆಲು

SPX 56 KN

**SHALIMAR PAINT, COLOUR & VARNISH CO., LTD.,**
**Post Box 136, Madras 1**

Printed by B. S. Iyengar, Bangalore City

**Publisher—B N. Gupta. Editor—M. Shivaram**